# ಹೀಗಿದ್ದೇವೆ ನಾವು

(ಲಲಿತ ಪ್ರಬಂಧಗಳು)

ಡಾ. ಜ್ಯೋತ್ಸ್ನಾ ಕಾಮತ್

# ಹೀಗಿದ್ದೇವೆ ನಾವು

(ಲಲಿತ ಪ್ರಬಂಧಗಳು)

ಡಾ|| ಜ್ಯೋತ್ಸ್ನಾ ಕಾಮತ್

ಪ್ರಕಾಶಕರು
**ಪುಸ್ತಕಾಲಯ**
ಜಯನಗರ, ಬೆಂಗಳೂರು-560 041

HEEGIDDEVE NAVU-A collection of essays in kannada by Dr. Jyotsna Kamath, published by Pustakalaya, 746, 16th Main, 37th 'F' Cross, 4th 'T' Block, Jayanagar, Bangalore-560 041



ಮೊದಲ ಮುದ್ರಣ : ಡಿಸೆಂಬರ್, ೧೯೯೩

**ಬೆಲೆ : ಇಪ್ಪತ್ತು ರೂಪಾಯಿಗಳು**

ಮುದ್ರಣ

**ಲಕ್ಷ್ಮಿ ಮುದ್ರಣಾಲಯ**

ಚಾಮರಾಜಪೇಟೆ, ಬೆಂಗಳೂರು ೧೮

ದೂರವಾಣಿ : ೬೬೧೩೧೨೩

# ಹಿನ್ನೆಲೆಯಾಗಿ

ನಗು ಮತ್ತು ಅಳು, ಅತಿ ಸುಲಭವಾಗಿ ಗುರುತಿಸಬಹುದಾದಂತಹ ಮಾನವೀಯ ಭಾವನೆಗಳು. ಮಗು ಹುಟ್ಟಿದ ಆರನೆಯ ವಾರದಿಂದಲೇ ಹೊಸದೇನಾದರೂ ಕಂಡರೂ ಕಿಲಕಿಲನೆ ನಗಲಾರಂಭಿಸುವದು. ಈ ನಗು ನೇರ ಮತ್ತು ಅತ್ಯಂತ ಸಹಜವಾದದ್ದು. ವಿವಿಧ ಚಟುವಟಿಕೆಗಳಲ್ಲಿ ತೊಡಗಿದ ಮಾನವನು ಮೂವತ್ತು ಪ್ರಕಾರಗಳಲ್ಲಿ ನಗಬಲ್ಲನು, ಎಂದು ಹೇಳುತ್ತಾರೆ. ನಗುವ ಸಾಮರ್ಥ್ಯ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ಉತ್ತೇಜಕ ಮನಸ್ಥಿತಿಯಲ್ಲಿದ್ದಾಗ ಮಾತ್ರ ನಗಲು ಸಾಧ್ಯವಿದ್ದುದರಿಂದ ವ್ಯಕ್ತಿಯ ಹಿನ್ನೆಲೆ, ಶಾರೀರಿಕ-ಮಾನಸಿಕ ಆರೋಗ್ಯ, ಆಸಕ್ತಿ, ಓದು, ಸಂಸ್ಕಾರ, ಸಂಸ್ಕೃತಿಗಳು ನಗುವಿನ ಪರಿಮಿತಿಗಳನ್ನು ನಿರ್ಧರಿಸುತ್ತವೆ. ಒಂದೇ ಸಂದರ್ಭಕ್ಕೆ ವಿವಿಧ ವ್ಯಕ್ತಿಗಳು ತೀರ ಭಿನ್ನವಾಗಿ ಪ್ರತಿಕ್ರಿಯಿಸುತ್ತಾರೆ. ನಸುನಗೆ, ಕಿರುನಗೆ, ಮೆಲುನಗೆ, ಮುಗುಳ್ನಗೆ, ಕುಲುಕುಲುನಗೆ, ಗಹ ಗಹಿಸುವ ನಗೆ, ಸ್ಫೋಟಕನಗೆ, ಹೊಟ್ಟೆಬಿರುಕ, ಅಟ್ಟಹಾಸ, ಇವುಗಳನ್ನೆ ಒಂದು ಸಮೂಹದಲ್ಲಿ ಏಕಕಾಲಕ್ಕೆ ಕಾಣಬಹುದಾಗಿದೆ. ಕೆಲವರು ಸದಾಕಾಲ ಮುಖಕ್ಕೆ ಗಂಟು ಹಾಕಿಕೊಂಡೇ ಇರಬಹುದು. ಲಾಭಕ್ಕಾಗಿ ವ್ಯಾಪಾರಿಬುದ್ಧಿಯುವರು, ಕೃತಕ ನಗೆಯನ್ನು ರೂಢಿಸಿಕೊಂಡಿರುತ್ತಾರೆ. ಸಾಮಾಜಿಕ ಅಥವಾ ವ್ಯಕ್ತಿಗಳ ಓರೆ-ಕೋರೆಗಳನ್ನು ಗಮನಿಸುವ ನಿರಪಾಯದ, ಅರಿವಿನಿಂದ ಕೂಡಿದ ನಗುವನ್ನು ಶಬ್ದಗಳಲ್ಲಿ ಮೂಡಿಸುವದು ಕಷ್ಟ ಸಾಧ್ಯ. ತನ್ನ ತಾನು ಅರಿಯಲು ಇಂಥ ನಗು ತುಂಬ ಸಹಾಯಕಾರಿ. ಇಲ್ಲಿಯ ಲಲಿತ ಪ್ರಬಂಧಗಳಲ್ಲಿ ಈ ನಗುವಿಗೇ ಆದ್ಯತೆ ಮತ್ತು ಪ್ರಾಧಾನ್ಯತೆ ಯನ್ನು ಕೊಡಲಾಗಿದೆ.

ನಮ್ಮ ದಿನಂಪ್ರತಿ ನಡಾವಳಿಕೆಗಳನ್ನೇ ಭೂತಕನ್ನಡಿಯಿಂದ ನೋಡಿ ನೆಗುವದರಲ್ಲಿ ಒಂದು ಬಗೆಯ ಸಾತ್ವಿಕ ಆನಂದವಿದೆ. ಅಂತೆಯೇ ಈ ಸಂಕಲನದಲ್ಲಿ ಬರುವ ಎಲ್ಲ ಪ್ರಬಂಧಗಳನ್ನು ನಮ್ಮ ಸುತ್ತಮುತ್ತವೇ ಹೆಣೆಯಲಾಗಿದೆ. ಆದರೆ ಸ್ಪಂದನಶೀಲ ಓದುಗರೆಲ್ಲ **ನಾವು ಇರುವದೇ ಹೀಗೆ!** ಎಂದು ತೀರ್ಮಾನಿಸಕೂಡದು. ಇವು ವಿಚಾರ ಲಹರಿಯ ವಿನ್ಯಾಸಗಳು ಕೆಲವೆಡೆ ಕಲ್ಪನಾವಿಲಾಸವೂ ಇದೆ. ನಮ್ಮ ಆತ್ಮಕಥನವಂತೂ ಅಲ್ಲವೇ ಅಲ್ಲ. ವಿನೋದಕ್ಕೆಂದೇ ಹಲವೆಡೆ ವಕ್ರೀಕರಿಸಿ ಚಿತ್ರಿಸಿದ್ದರಿಂದ ನನ್ನ ಯಜಮಾನರಾದ ಡಾ|| ಕೃಷ್ಣಾನಂದ ಕಾಮತರ ವ್ಯಕ್ತಿತ್ವ ಮತ್ತು ಜೀವನ ಕ್ರಮಗಳ ಬಗ್ಗೆ ತಪ್ಪು ಕಲ್ಪನೆ ಮೂಡುವ ಸಾಧ್ಯತೆ ಇದ್ದೇ ಇದೆ. ಆದರೆ ಇದರಿಂದಾಗಿ ಹೆಸರಾಂತ ಲೇಖಕರಾದ ಅವರು, ತಮ್ಮ ಪ್ರತಿಷ್ಠೆಗೆ ಕುಂದು ಬಂದೀತೆಂದು ಎಂದೂ ಭಾವಿಸಿದವರಲ್ಲ. ಇಂಥ ಲೇಖಗಳು ಹೊರಬರಲು ಮೂಲತಃ ಅವರ ಸಹಜವಿನೋದಿ ಸ್ವಭಾವವೇ ಕಾರಣ. ನನ್ನ ಬರವಣಿಗೆಗೆಲ್ಲ ಅವರ ಎಡಬಿಡದ ಪ್ರತ್ಯಕ್ಷ ಪ್ರೋತ್ಸಾಹವನ್ನು ಪುನಃ ಪುನಃ ಜ್ಞಾಪಿಸಿ ಕೊಳ್ಳುತ್ತೇನೆ.

ಈ ಸಂಕಲನದಲ್ಲಿಯ ಆರು ಪ್ರಬಂಧಗಳು ವಿವಿಧ ಕನ್ನಡ ಪತ್ರಿಕೆಗಳಿಗಾಗಿ ಆಮಂತ್ರಿತವಾಗಿ ಬರೆದವುಗಳು. ಉಳಿದವೆಲ್ಲ ಹೊಸದಾಗಿ ಬರೆದವುಗಳು. ನನ್ನ ಪ್ರಥಮ ಕೌಟುಂಬಿಕ ಹಾಸ್ಯದ ಕುರಿತಾದ ಕೃತಿ **'ಸಂಸಾರದಲ್ಲಿ ಸ್ವಾರಸ್ಯ'**ವನ್ನು ಓದಿ ಮೆಚ್ಚಿಕೊಂಡವರಲ್ಲಿ ಪ್ರೊ|| ಎ.ಎನ್. ಮೂರ್ತಿರಾವ್, ಚದುರಂಗರು, ವ್ಯಾಸರಾಯ ಬಲ್ಲಾಳರು, ಯಶವಂತ ಚಿತ್ತಾಲರು ಹಾಗೂ ದಿ|| ವಿ.ಜಿ. ಭಟ್ ಮೊದಲಾದ ಹಿರಿಯ ಲೇಖಕರು ಪ್ರಮುಖರು. ಅವರೆಲ್ಲರ ಪ್ರೋತ್ಸಾಹವೇ ಈ ಕೃತಿಗೆ ಆಧಾರ. ಪುಸ್ತಕಾಲಯದ ಉತ್ಸಾಹಿ ಪ್ರಕಾಶಕರಾದ ಶ್ರೀ ಕೆ.ಎಸ್. ಗೋಪಾಲ್ ಅವರು ಹಸ್ತಪ್ರತಿಗಾಗಿ ಒತ್ತಾಯಿಸಿ ಬೇಗನೆ ಬರೆದು ಮುಗಿಸುವಂತೆ ನೋಡಿಕೊಂಡರಲ್ಲದೇ ಅದನ್ನು ಅಚ್ಚುಕಟ್ಟಾಗಿ ಮುದ್ರಿಸುವ ಸಂಪೂರ್ಣ ಹೊಣೆ ಹೊತ್ತುಕೊಂಡದ್ದಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸದೇ ಇರಲಾರೆ. ಈ ಗ್ರಂಥಕ್ಕೆ ಬಳಸಿದ ಛಾಯಾ ಚಿತ್ರ ಮತ್ತು ರೇಖಾಚಿತ್ರಗಳನ್ನು ಡಾ|| ಕೃಷ್ಣಾನಂದ ಕಾಮತರೇ

ಪೂರೈಸಿದ್ದಾರೆ. ಅವರಿಗೆ ಋಣಿ. ಈ ಕೃತಿಯ ಕುರಿತಾದ ತಮ್ಮ ಅನಿಸಿಕೆಗಳನ್ನು ಓದುಗರು ತಿಳಿಸುವ ಕೃಪೆ ಮಾಡಿದಲ್ಲಿ ಕೃತಜ್ಞಳಾಗಿರುವೆ. ಇದನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರ ಸಹಕಾರವನ್ನು ಸ್ಮರಿಸದಿರಲಾರೆ.

**ಜ್ಯೋತ್ಸ್ನಾ ಕಾಮತ್**
110, ಶಶಿಕಿರಣ್
18ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು–560 055

25–11–1993

# ಪರಿವಿಡಿ


| | |
|---|---|
| ಹಿನ್ನೆಲೆಯಾಗಿ | |
| ಕಳ್ಳರ ಕಳ್ಳ.... | 9 |
| ಹೀಗೂ ಉಂಟೆ....? | 16 |
| ಕಗ್ಗತ್ತಲೆಯಲ್ಲಿ ತಿರುಗಾಟ | 23 |
| ಲಕ್ಷ್ಮಿ ಹೋಗಲೊಲ್ಲಳು ! | 33 |
| ಉಪ್ಪಿನಕಾಯಿಯ ಹಾಬಿ | 45 |
| 'ಮಾರುತಿ' ಗೀಳು | 54 |
| ಊಟಕ್ಕಿದ್ದರೂ ಲೆಖ್ಖಕ್ಕಿಲ್ಲ ! | 61 |
| ಜೀವಂತ ಗಡಿಯಾರ | 70 |
| ಬಂಧುಗಳ ಗೊಂದಲ | 76 |
| ಮೈಸೂರಿನ ನೆನಪುಗಳು | 86 |
| ಕ್ರಿಕೆಟ್ ಕಪ್ತಾನ | 95 |
| ರಾಯರ ಹೇರ್ ಕಟ್ | 107 |
| ಅಜ್ಞಾತರ ಪತ್ರಗಳು | 115 |
| ಸೇವಕಿಯ ಸೇವೆ | 127 |
| ಚಪ್ಪಲ್ ಖರೀದಿ | 139 |
| ವೇಳೆ ತಿಳಿಯದವರ ಮೇಳ | 150 |

# ಕಳ್ಳರ ಕಳ್ಳ.......



ಕೆಲಕಾಲದಿಂದ ಬೆನ್ನಟ್ಟ ಬಂದ ಗಂಟಲ ನೋವಿಗೆ, ಎರಡು ವಾರಗಳ ಚಿಕಿತ್ಸೆ ಪಡೆದು ಮೈಸೂರಿನಿಂದ ಹಿಂದಿರುಗಿದಾಗ, ರಾಯರು ಎಂದಿನಂತೆ ನಗು ಮುಖದಿಂದ ಬರಮಾಡಿಕೊಳ್ಳದ್ದರಿಂದ ಕಸಿವಿಸಿಯಾಯಿತು. ನನ್ನ ಆರೋಗ್ಯದ ಬಗ್ಗೆಯೂ ವಿಚಾರಿಸದೇ ಏನೋ ಬರೆಯುವದರಲ್ಲಿ ತನ್ಮಯರಾಗಿದ್ದರಿಂದ ಏನೋ ಅಚಾತುರ್ಯ ನಡೆದಿರಬೇಕು ಅಂದುಕೊಂಡೆ. "ಮನೆಗೆಲಸದ ನಿರ್ವಹಣೆ ಸಾಗದೇ ಮೈಸೂರಿನಲ್ಲಿ ಹಾಯಾಗಿರಲು ಹೋಗಿದ್ದಾಳೆಂದು ಪರಿಗಣಿಸಿರಬಹುದೇ ? ಛೇ ! ಛೇ! ಇಂಥ ವಿಚಾರಗಳು ಇವರತ್ತ ಸುಳಿಯುತ್ತಿದ್ದರೆ, ನಮ್ಮ ಸಂಸಾರ ಇಷ್ಟೊಂದು ಸುಗಮವಾಗಿ ಸಾಗುತ್ತಿರಲಿಲ್ಲ !" ಎಂದು ತರ್ಕಿಸಿ, ಸುತ್ತ ಕಣ್ಣು ಹಾಯಿಸಿದಾಗ, ಬಟ್ಟೆ-ಬರೆ, ಸಾಮಾನುಗಳೆಲ್ಲ ಮನೆ ತುಂಬ ಚೆಲ್ಲಾಪಿಲ್ಲಿಯಾಗಿ ಹರಡಿದ್ದು ನೋಡಿ ಹೌಹಾರಿದೆ. "ಇದೇನು ? ಕಳ್ಳ ಹೊಕ್ಕ ಮನೆಯಾಗಿದೆಯಲ್ಲ?" ಎಂದು ಕಿರುಚಿದೆ. "ಹೌದೌದು ! ಕಳ್ಳ ಮನೆಗೆ ನುಗ್ಗಿದ್ದು ನಿಜ. ಆದರ ವರದಿಯನ್ನೆ

ಪೊಲೀಸರಿಗೆ ಬರೆಯುತ್ತಿದ್ದೇನೆ" ಎಂದು ತಲೆಯೆತ್ತದೇ ನಿರ್ವಿಕಾರವಾಗಿ ಹೇಳಿದರು. "ಅಯ್ಯೋ ಅಯ್ಯೋ! ಕಳ್ಳತನ ಬೇರೆ, ಈಗ ಪೊಲೀಸರ ಕಾಟಕ್ಕೆ ಆಹ್ವಾನ ಕಳಿಸುತ್ತಿದ್ದೀರಾ? ದಮ್ಮಯ್ಯ ಬೇಡ, ಆದದ್ದು ಆಗಿ ಹೋಯಿತೆಂದು ಸುಮ್ಮನಿರೋಣ" ಎಂದು ವಾದಿಸಲು ಯತ್ನಿಸಿದೆ. "ಈ ವರದಿ ಮುಗಿಯುವವರೆಗೆ ಶಾಂತಳಾಗಿರು" ಎಂದು ಕಟ್ಟಪ್ಪಣೆ ಕೊಡಿಸಿದರು. ಅಂತೆಯೇ ಕಳವಿನ ವಿವರಗಳನ್ನು ಅರಿಯಲು ಅವರು ಬರೆಯುತ್ತಿದ್ದುದನ್ನು ಓದದೇ ಬೇರೆ ಮಾರ್ಗವಿರಲಿಲ್ಲ.

"ಪೊಲೀಸ್ ಸುಪರಿಂಟೆಂಡೆಂಟ್ ಸಾಹೇಬರ ಸನ್ನಿಧಿಗೆ ಸಾಷ್ಟಾಂಗ ನಮಸ್ಕಾರಗಳು. ಪ್ರಜೆಗಳ ಸುರಕ್ಷತೆಯ ಸರ್ವ ಜವಾಬ್ದಾರಿ ಹೊತ್ತ ತಮಗೆ ನಿನ್ನೆ ಮಧ್ಯರಾತ್ರಿಯ ನಂತರ ನಮ್ಮ ಮನೆಯಲ್ಲಿ ನಡೆದ ಘಟನೆಯ ವರದಿಯನ್ನು ಮಾಡುವದು ನನ್ನ ಕರ್ತವ್ಯವೆಂದು ತಿಳಿದಿದ್ದೇನೆ. ಬೇಸಿಗೆಯ ಸೆಕೆಯಿಂದಲೂ ಮೈಸೂರಿನಲ್ಲಿದ್ದ, ಅನಾರೋಗ್ಯದಿಂದ ಬಳಲುತ್ತಿದ್ದ ಪತ್ನಿಯಿಂದ ಪತ್ರ ಬಾರದಿದ್ದರಿಂದಲೂ ನಿದ್ರೆ ಬಾರದೇ ಹೊರಳಾಡುತ್ತ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದೆ. ನಡುರಾತ್ರಿಯ ಬೀಟ್ ಪೊಲೀಸರು ಸೀಟಿ ಬಾರಿಸುತ್ತ, ಎದುರು ಮನೆಯ ಮಾವಿನ ಮರದಿಂದ ಉದುರಿದ ಹಣ್ಣುಗಳನ್ನು ಆರಿಸಿ ತಿನ್ನುತ್ತ ಹೊರಟುಹೋದ ನಂತರ ನಮ್ಮ ಹೊರ ಬೈಠಕಖಾನೆಯಲ್ಲಿ ಮಾನವಾಕೃತಿಯೊಂದು ನೆರಳಿನಂತೆ ಚಲಿಸುವದು ಕಂಡಿತು. ಥಿಗ್ಗನೆ ಎದ್ದು ಬಾಗಿಲು ತೆಗೆದೆ.

"ತಾವು ಯಾರು? ನನ್ನಿಂದೇನು ಬೇಕಾಗಿತ್ತು?" ಎಂದು ವಿಚಾರಿಸಿದೆ. ಮಿಂಚಿನ ವೇಗದಿಂದ ಒಳ ಬಂದು ಬಾಗಿಲು ಮುಚ್ಚಿ ಚಿಲಕ ಹಾಕಿ, "ಬೊಬ್ಬೆ ಬೇಡ್ ಉಸಾರ್!" ಎಂದು ವಿಚಿತ್ರ ಕನ್ನಡದಲ್ಲಿ ಮಾತಾಡಿ, ಕೈ ಚೀಲದಲ್ಲಿದ್ದ ಚಾಕು ತೋರಿಸಿ, ನನ್ನನ್ನು ಎಳೆದುಕೊಂಡೇ ಒಳಕೋಣೆಗೆ ಬಂದ. ತನ್ನ ಚಾಕು ಎಷ್ಟು ಹರಿತವಾಗಿದೆ ಎಂದು ತೋರಿಸಲೋ ಎಂಬಂತೆ ಬಟ್ಟೆ ಒಣಹಾಕಲು ಕಟ್ಟಿದ ನಾಯಲೋನ್ ಹಗ್ಗ ಕತ್ತರಿಸಿ, ಅದರಿಂದ ಊಟದ ಟೇಬಲ್ ಕಾಲಿಗೆ ನನ್ನನ್ನು ಕಟ್ಟಿಹಾಕಿದ. ಪತ್ನಿಯ ಅಲಂಕಾರ ಟೇಬಲ್ಲಿಗೆ ಧಾವಿಸುವಾಗ ಕುರ್ಚಿಗೆ ಅಪ್ಪಳಿಸಿ ಮುಗ್ಗರಿಸಿದ. "ಎಡಗಡೆಗೆ ದೀಪದ ಸ್ವಿಚ್ ಇದೆ,

ಬಳಸಿ" ಎಂದೆ. ನನ್ನವಳ ಆಭರಣಗಳನ್ನೆಲ್ಲ ಒಂದೊಂದಾಗಿ ಹೊರೆಗೆಳೆದು ಟೇಬಲ್ ಮೇಲೆ ಅಪ್ಪಳಿಸಿ ಎಸೆದು ಗುಡಿಗಿದ. "ಬೆಳ್ಳಿ, ಬಂಗಾರ ಒಡವೆ ಎಲ್ಲಿ?"

"ಆ ಬಳೆಗಳು ರಾಜಸ್ಥಾನದಲ್ಲಿ ಕೊಂಡಿದ್ದು, ಅರಗಿನವು. ಅವಕ್ಕೆ ಚಿಕ್ಕ ಚಿಕ್ಕ ಕನ್ನಡಿ ಚೂರು ಜೋಡಿಸಿ ಆಕರ್ಷಕ ಬಳೆಗಳನ್ನು ಮಾಡುವ ಕಲೆಯನ್ನು ಅವರು ಕರಗತ ಮಾಡಿಕೊಂಡಿದ್ದಾರೆ. ಆ ಖಾನೆಯಲ್ಲಿದ್ದ ಜೋಡಿ ಶಂಖದ ಬಳೆ ನೀವು ನೋಡಿಲ್ಲ. ಬಂಗಾಲದಲ್ಲಿ ಕೊಂಡಿದ್ದು. ಸೌಭಾಗ್ಯ ಹೆಚ್ಚುತ್ತದೆಂದು ವಿವಾಹಿತ ಮಹಿಳೆಯರು ಧರಿಸುತ್ತಾರೆ. ಆ ಸಿಂಡಿನ ಸರ ರಾಮೇಶ್ವರದಲ್ಲಿ ಕೊಂಡದ್ದು...." ಎಂದು ವಿವರಣೆ ಕೊಡುವಾಗ "ತಲೆಹರಟೆ ಬೇಡ. ಗೋಡ್ರೆಜ್ ಕೀ ಎಲ್ಲಿ?" ಎಂದ. "ನಿಮ್ಮಂಥ ಅತಿಥಿಗಳಿಗೆ ತೊಂದರೆ ಬೇಡವೆಂದು ನಾವು ಯಾವ ಬೀರು, ಕಪಾಟು, ಸೂಟ್ ಕೇಸು, ಟ್ರಂಕು ಗಳಿಗೆ ಬೀಗ ಹಾಕುವುದೇ ಇಲ್ಲ!...." ಎನ್ನುತ್ತಿದ್ದಂತೆ ಗೋಡ್ರೆಜ್ ಸೇಫ್ ತೆರೆದುಕೊಂಡಿತು. ಗೊಣಗುತ್ತಲೇ "ಈ ಮನೆಯಲ್ಲಿ ಕುಟುಂಬಯೋಜನೆಗೆ ಆದ್ಯತೆ ಇದ್ದಂತಿಲ್ಲ ! ಹಳೇದು ! ಎಲ್ಲ ವಯಸ್ಸಿನ ಮಕ್ಕಳ ಬಟ್ಟೆನಾ?" ಎಂದ ತಿರಸ್ಕಾರದಿಂದ.

"ಅಯ್ಯೋ, ಗೌರವ ಅತಿಥಿಯೇ ! ನಮಗೆ ಇರುವವನು ಒಬ್ಬನೇ ಮಗ. ಅವನೂ ದೂರದ ದೇಶದಲ್ಲಿದ್ದಾನೆ. ಆತನ ಬಾಲ್ಯದ ನೆನಪು ಹಸಿರಾಗಿಯೇ ಉಳಿಸಲು ಅವನಮ್ಮ, ಶಿಶುವಾಗಿದ್ದಾಗ ತೊಡಿಸುತ್ತಿದ್ದ ಬಾಬಾ ಸೂಟ್‌ಗಳು, ಶಾಲೆಗಳಿಗೆ ಹೋಗುವಾಗಿನ ಸಮವಸ್ತ್ರಗಳು ಸ್ಕೌಟ್, ಎನ್.ಸಿ.ಸಿ, ಶಿಸ್ತಿನ ಬಟ್ಟೆ ಕಾಲೇಜಿಗೆ ಹೋಗುತ್ತಿದ್ದಾಗ ತೊಡುತ್ತಿದ್ದ ಪ್ಯಾಂಟ್–ಶರ್ಟ್‌ಗಳು, ನೌಕರಿಗೆ ಸೇರಿದಾಗಿನ ಸಫಾರಿಗಳನ್ನೆಲ್ಲ ಡಾಂಬರು ಗುಳಿಗೆ ಸೇರಿಸಿ ಕಾದಿರಿಸಿದ್ದಾಳೆ. ಆ ಕಟ್ಟೆಟ್ಟ ಮೂಟೆಯಲ್ಲಿ ಮಗುವಿದ್ದಾಗ ಹಾಕುತ್ತಿದ್ದ ಕುಲಾವಿ, ಝಬಲಾ, ಕೌದಿ, ಹಚ್ಚಡ, ಪುಟ್ಟ ರಗ್‌ಗಳೆಲ್ಲಾ ಇವೆ!...." ಎನ್ನುತ್ತಿರುವಾಗಲೇ ದೊಡ್ಡ ಟ್ರಂಕಿನ ಬಾಗಿಲು ತೆರೆದ ಸದ್ದಾಯಿತು. ಅಪೂರ್ವದ ಕಲಾಪುಸ್ತಕಗಳನ್ನೆಲ್ಲ ತೆಗೆ ತೆಗೆದು ನೆಲಕ್ಕೆಸೆಯುವ ಸಪ್ಪಳ ಕೇಳಿ, "ಅದು

ನಮ್ಮ ಸರಸ್ವತಿ ಭಂಡಾರ. ಅಮೆರಿಕೆಯಿಂದ ತಂದ ಪುಸ್ತಕಗಳು ನಿನಗೆ ಬೇಕಾದವನ್ನು ಆರಿಸು. ಆದರೆ ನಿರ್ದಯನಂತೆ ಎಸೆಯಬೇಡ!" ಎಂದು ಸಮಜಾಯಿಸಿ ಹೇಳಿದೆ. "ಟ್ರಂಕಿಗೆ ಬೀಗ ಹಾಕಿಲ್ಲ. ಬಾಯಿಗೆ ಬೀಗಾ ಹಾಕ್ಕೊಳ್ರಿ!" ಎಂದು ರೇಗಾಡಿದ.

ಗೋಡೆಗೆ ಜೋಡಿಸಿದ ಮರದ ಕಪಾಟಿನ ಬಾಗಿಲು ತೆಗೆದ ಸದ್ದು. ಅದರಲ್ಲಿ ವ್ಯವಸ್ಥಿತವಾಗಿ ಜೋಡಿಸಿದ್ದ ಪುಟ್ಟ ಡಬ್ಬಿ ತೆಗೆದು ನೋಡಿ ನೆಲಕ್ಕು ರುಳಿಸಲಾರಂಭಿಸಿದ "ಸ್ವಾಮಿ, ಅದರಲ್ಲಿ ಇರುವವೆಲ್ಲ ನೆಗೆಟಿವ್‌ಗಳು. ಕಳೆದ ಇಪ್ಪತ್ತೆರಡು ವರ್ಷಗಳಿಂದ ರಾಷ್ಟ್ರೀಯ ಸಂಶೋಧನಾಲಯಗಳ ಶಿಕ್ಷಕ–ವಿದ್ಯಾರ್ಥಿಗಳು ನಡೆಸಿದ ಸಂಶೋಧನಾಲಯಗಳ ವೈಜ್ಞಾನಿಕ ಛಾಯಾಗ್ರಹಣ ಮಾಡಿಕೊಂಡು ಬಂದಿದ್ದೇನೆ. ಈಗ ಅವು ಯಾರಿಗೂ ಬೇಕಾಗಿಲ್ಲ. ನೀವು ಅವುಗಳನ್ನು ಬಳಸಿಕೊಳ್ಳುವುದಾದರೆ ಒಯ್ಯಬಹುದು" ಎಂದೆ. ಶಾಪ ಹಾಕುತ್ತ ಟೇಬಲ್‌ಗಳಿಗೆ ಜೋಡಿಸಿದ ಡ್ರಾಯರ್‌ಗಳನ್ನು ಎಳೆದೆಳೆದ ಸದ್ದಾಯಿತು. "ಬರೆಯಲು ಬಳಸುವ ದೊಡ್ಡ ಟೇಬಲ್ ಡ್ರಾಯರ್‌ನಲ್ಲಿ ಇರುವದು ಛಾಯಾಚಿತ್ರಗಳಲ್ಲಿ ಬೇಕಾದ ಆಕಾರ ಕೊಡುವಾಗ ಬೀಳುವ ಚೂರುಗಳು. ಉಕ್ಕಿನ ಟೇಬಲ್ ಖಣದಲ್ಲಿರುವವು, ಪತ್ನಿ ಬರೆದ ಪತ್ರಗಳು. ತೇಗಿನ ಟೇಬಲ್ಲಿನ ಹೊಟ್ಟೆಯಲ್ಲಿರುವುವು ಮಗ ಅಮೇರಿಕೆಯಿಂದ ಬರೆದವುಗಳು. ಅವುಗಳಲ್ಲಿ ಸಾಹಿತ್ಯಿಕ ಅಂಶಗಳನ್ನು ಗಮನಿಸಿ ಕಾದಿರಿಸಿದ್ದೇನೆ. ನಿನಗೇನಾದರೂ ಪತ್ರ ಸಾಹಿತ್ಯಿ ರಚಿಸುವ ವಿಚಾರವಿದ್ದರೆ, ಖಂಡಿತ ಅವುಗಳನ್ನು ಧಾರೆಯೆರೆದು ಕೊಟ್ಟುಬಿಡುತ್ತೇನೆ" ಎಂದಾಗ ಕೆಂಗಣ್ಣುಗಳಿಂದ ದುರದುರನೆ ನೋಡುತ್ತ, ಬೈಯುತ್ತ, ಬೆಡ್‌ರೂಮಿಗೆ ಧಾವಿಸಿದ.

"ಅರೆನಿದ್ರೆಯಲ್ಲಿ ಎಚ್ಚತ್ತು ಬಂದಿದ್ದರೆ, ಖಂಡಿತ ಸುಖವಾಗಿ ಮಲಗಬಹುದು. ಸೊಳ್ಳೆ ಪರದೆ ಬೇಕಾದರೆ ದಿಂಬಿನ ಕೆಳಗೇ ಇದೆ. ಆದರೆ ಹಾಸಿಗೆ ಅಡಿಯಲ್ಲಿ ಬೆಳ್ಳಿ ಬಂಗಾರದ ಆಭರಣಗಳನ್ನು, ನೋಟಿನ ಕಂತೆಗಳನ್ನು ಇಡುವ ಪರಿಪಾಠವನ್ನು ಬೆಳೆಸಿಕೊಳ್ಳಲೇ ಇಲ್ಲ!!" ಎಂದಾಗ ಉಸುರ್ಗರೆದು ಅಡಿಗೆ ಮನೆಗೆ ಕಾಲಿಟ್ಟ. ಅಕ್ಕಿ, ಬೇಳೆ, ಗೋಧಿಗಳನ್ನೆಲ್ಲ ನೆಲಕ್ಕೆ ಸುರಿಯು

ಲಾರಂಭಿಸಿದಾಗ, "ನನ್ನ ಯಜಮಾನಿ ಬೆಲೆಬಾಳುವ ವಸ್ತುಗಳನ್ನು ಧಾನ್ಯದ ಡಬ್ಬಿಯಲ್ಲಿ ಅಡಗಿಸುವಷ್ಟು ಜಾಣೆಯಲ್ಲ ..." ಎಂದು ಮಾತು ಮುಗಿಸುವ ಮೊದಲೇ, ಆಗಂತುಕನ, "ಆಯಮ್ಮ ದೊಡ್ಡ ಸಾಹೇಬ್ರು, ತುಂಬ ವಸ್ತಾವಡ್ವೆ ಮಾಡ್ಸಿದ್ದಾರೆ ಅಂತಾ ಅವರು ಊರಲ್ಲಿಲ್ಲದ ಹೊತ್ತಿಗೆ ಬಂದ್ರೆ ಈಯಪ್ಪಂದು ಬರೇ ಮಾತು !" ಎನ್ನುವ ಅರ್ಥದ ಕಡುಕೋಪದ ಮಾತುಗಳು ಕೇಳಿ ಬಂಧವು. ನಂತರ ಅಡಿಗೆ ಪಾತ್ರೆಗಳ ಮುಚ್ಚಳಗಳನ್ನೆಲ್ಲಾ ತೆಗೆಯುತ್ತಿದ್ದಾಗ, "ಪ್ರಿಯ ಅತಿಥಿ, ನನಗೆ, ಪ್ರತಿದಿನ ಅಡಿಗೆಗೆ ವೇಳೆ ಹಾಕಲು ಮನಸ್ಸಿಲ್ಲ. ಅಂತೆಯೇ ವಾರಕ್ಕಾಗುವಷ್ಟು ಅನ್ನ-ಹುಳಿ-ಪಲ್ಯಗಳನ್ನು ಇಂದೇ ಮಾಡಿ ಇಟ್ಟಿದ್ದೇನೆ. ಹಸಿವಾಗಿದ್ದರೆ ಖಂಡಿತ ಹೊಟ್ಟೆ ತುಂಬ ಊಟ ಮಾಡಬಹುದು. ಆ ದೊಡ್ಡ ಭರಣಿಯಲ್ಲಿ ಲಿಂಬೇಹಣ್ಣಿನ ಉಪ್ಪಿನ ಕಾಯಿಯಿದೆ. ಸಣ್ಣ ಭರಣಿಯಲ್ಲಿ ಅಪ್ಪೆಮಿಡಿ ಮಾವಿನ ಉಪ್ಪಿನ ಕಾಯಿ, ಹಾರ್ಲಿಕ್ಸ್ ಬಾಟ್ಲಿಯಲ್ಲಿ ತುಪ್ಪವಿದೆ. ಬಕ್ಕರ್‌ನಲ್ಲಿ ಬೆಣ್ಣೆಯಿದೆ. ಬೋಗುಣಿಯಲ್ಲಿ ಹಾಲಿದೆ. ಭೂಪಾತ್ರದಲ್ಲಿ ಕೆನೆಮೊಸರಿದೆ" ಎಂದು ನಿರ್ದೇಶನ ಕೊಡುತ್ತಿರುವಾಗಲೇ ಭುರ್ ಭುರ್ ಎಂದು ಊಟ ಮಾಡುತ್ತಿರುವ ಸಪ್ಪಳ ಕೇಳಿ ನೆಮ್ಮದಿಯಾಯಿತು !

ಅಡಿಗೆ ಖಾಲಿ ಮಾಡಿ, ಕೈ ತೊಳೆಯುತ್ತಿದ್ದಂತೆ ಆತ ಕಕ್ಕಸಿಗೆ ಧಾವಿಸಿದ್ದರಿಂದ ತುರ್ತುಪರಿಸ್ಥಿತಿ ಜಾರಿಗೆ ಬಂದ ಅರಿವಾಯ್ತು. ಐದು ನಿಮಿಷಗಳಲ್ಲಿ ಹೊರಗೆ ಬಂದವನೇ "ಸ್ವಾಮಿ ನಾನು ಕಾಡಿನ ಮನುಷ್ಯ. ನಗರದ ಕಕ್ಕಸು ಪರಿಚಯವಿಲ್ಲ. ನೀರು ಹೇಗೆ ಬಿಡುವುದು ಎಂದು ತೋರಿಸುವ ಕೃಪೆ ಮಾಡುವಿರಾ ?" ಎಂದು ಅತ್ಯಂತ ವಿನಯದಿಂದ ಹೇಳುತ್ತ ಕಟ್ಟಿದ ನಾಯಲೋನ ಹಗ್ಗವನ್ನು ಚಾಕುವಿನಿಂದ ಕತ್ತರಿಸಿ ನನ್ನನ್ನು ಬಂಧಮುಕ್ತ ಮಾಡಿದ. ಸರಪಳಿ ಎಳೆದರೆ ಜೋಗ ಜಲಪಾತದಂತೆ ನೀರು ಸಪ್ಪಳದೊಂದಿಗೆ ಧುಮುಕುತ್ತದೆ, ಎಂದು ತೋರಿಸಿದಾಗ, ಅವನಿಗೆ ಸೋಜಿಗವೆನಿಸಿ ತಾನೂ ಒಮ್ಮೆ ಫ್ಲಶ್ ಮಾಡಿ ಆನಂದಿಸಿದ.

ಅವನು ಆದಾಗಲೇ ಹೊಟ್ಟೆ ತುಂಬ ಉಂಡಿದ್ದರಿಂದ, ದಕ್ಷಿಣೆಯನ್ನೂ

ಕೊಟ್ಟು ಪುಣ್ಯ ಕಟ್ಟಿಕೊಳ್ಳೋಣವೆಂದು ಶರ್ಟು-ಪ್ಯಾಂಟುಗಳ ಜೇಬುಗಳನ್ನು ಬರಿದು ಮಾಡಿ, ಐದು ರೂಪಾಯಿಗಳನ್ನು ಕೊಡಹೋದಾಗ, "ಸ್ವಾಮಿ ನಿಮ್ಮಂಥ ಜನಾ ಇರ್ತಾರೆ ಎಂದರೆ ನಂಬ್ತಾನೇ ಇರಲಿಲ್ಲ. ನಿಮ್ಮಿಂದ ಹಣಪಡೆದು ಯಾವ ನರಕಕ್ಕೆ ಹೋಗ್ಲಿ ? ನನ್ನ ನೆನಪಿಗೆ ಇರ್ಲಿ" ಎಂದು ಜೇಬಿನಲ್ಲಿದ್ದ ಒಂದೇ ಒಂದು ಬೀಡಿಯನ್ನು-ಇನ್ನೇನೂ ಇಲ್ಲ ಎಂದು ವಿಷಾದ ದಿಂದ ಹೇಳಿ ಕೈಗಿತ್ತ. ಆ ರಾತ್ರಿಯ ಅತಿಥಿಯನ್ನು ಹಿಂದಿನ ಬಾಗಿಲಿನಿಂದ ಕಳಿಸಲು ಮನಸ್ಸಾಗದೇ ಹೆಬ್ಬಾಗಿಲನ್ನೇ ತೆರೆದೆ. "ಇನ್ನೊಮ್ಮೆ ಬರುವಾಗ ಈ ಬಾಗಿಲನ್ನೆ ಬಳಸಿ, ಹಿತ್ತಿಲು ಬಾಗಿಲು ಬೇಡ" ಎಂದು ವಿನಂತಿಸಿಕೊಂಡೆ. ಏನೋ ಯೋಚಿಸಿ "ನಾನು ಬಂದ ವಿಚಾರ ಪೊಲೀಸಿನವರಿಗೆ ತಿಳಿಸುವ ತೊಂದರೆ ತೆಗೆದುಕೊಳ್ಳಬೇಡಿ ! ನಾನು ಅವರಿಗೆ ಸೊಪ್ಪು ಹಾಕದಿದ್ದರೂ ಅವರೇ ನನಗೆ ಬಹಳ ಹೆದರುತ್ತಾರೆ" ಎಂದು ಅರ್ಥಗರ್ಭಿತವಾಗಿ ಹೇಳಿ, ಕ್ಷಣಾರ್ಧದಲ್ಲಿ ಕತ್ತಲಲ್ಲಿ ಕರಗಿ ಹೋದ. ಕಳ್ಳರಿಂದ ಕಾಯಲು ನೇಮಿಸಲ್ಪಟ್ಟ ನಮ್ಮ ಕಾವಲುಗಾರ ಗೊರಕೆ ಹೊಡೆಯುತ್ತಿದ್ದ !

ಇಂತೀ

ಕಾನೂನುಪಾಲಿಸುವ ನಾಗರಿಕ

ರಾಯರು ಕೊನೆಯ ಸಾಲುಗಳನ್ನು ಬರೆದು ಮುಗಿಸುತ್ತಿದ್ದಂತೆ ಓದಿ ಇವರು ಎಂಥ ಸ್ಥಿತಪ್ರಜ್ಞರೆಂದು ಬೆಪ್ಪಾಗಿ ನಿಂತೆ. ಅನಂತರ ಇಬ್ಬರೂ ಸೇರಿ ಕಳ್ಳನು ಅಲ್ಲೋಲಕಲ್ಲೋಲವೆಬ್ಬಿಸಿದ ಮನೆಯಲ್ಲಿ ಸಾಮಾನುಗಳನ್ನೆಲ್ಲ ಮತ್ತೆ ಜೋಡಿಸಿಡಲು ಇಡೀ ದಿನ ಹಾಕಿದೆವು. ಕೈಗಳು ಕೆಲಸ ಮಾಡುತ್ತಿದ್ದರೂ ಬಾಯಿಗಳು ಕಳ್ಳ-ರಾಯರ ಸಂಭಾಷಣೆಯನ್ನು ಚರ್ಚಿಸು ತ್ತಿದ್ದವು.

* * * *

ಪೊಲೀಸ ಖಾತೆಯವರು ವಿದ್ಯುತ್ ವೇಗದಿಂದ ರಾಯರ ಪತ್ರಕ್ಕೆ ಉತ್ತರಿಸಿದ್ದು ನೋಡಿ ವಿಸ್ಮಯವಾಯಿತು. ಪತ್ರದ ಒಕ್ಕಣಿಕೆ ಹೀಗಿತ್ತು

ಕಾನೂನುಪಾಲಕ ನಾಗರಿಕರಿಗೆ,

ಗೌರವ ಪೂರ್ವಕ ವಂದನೆಗಳು.

ತಾವುಗಳು ಅಷ್ಟೊಂದು ಸ್ವಾರಸ್ಯಪೂರ್ವಕ ಸಂಭಾಷಣೆ ನಡೆಸಿ,

ಉಪಚಾರ ಮಾಡಿದ ವ್ಯಕ್ತಿ ಯಾರು ಗೊತ್ತೆ? ವರ್ಷಗಳಿಂದ ನಮ್ಮನ್ನೆಲ್ಲ ಕಾಡುತ್ತಿರುವ ಕಾಡುಗಳ್ಳ ವೀರಪ್ಪನ್. ನಮ್ಮವರೆಲ್ಲ ಕಾಡಿನಲ್ಲಿ ಗಸ್ತು ಹಾಕಿ ಅವನನ್ನು ಊರಿಗೆ ಓಡಿಸಿ ಅನ್ನಕ್ಕೂ ಕಾಸಿಲ್ಲದಂತಾಗಿದೆ. ಅಂತೆಯೇ ನಗರ ಗಳ್ಳನಾಗಲು ಬೆಂಗಳೂರಿಗೆ ಬಂದಿರಬಹುದೆಂದು ಮೈಸೂರು ಕಂಟ್ರೋಲ್ ರೂಮಿನಿಂದ ವರದಿ ಮಾಡಿದ್ದರು. ನಾವು ಎಲ್ಲೆಡೆ ಶೋಧಿಸಿದರೂ ಅವನ ಸುಳಿವು ಸಿಗಲಿಲ್ಲ. ಅವನನ್ನು ಬಂಧಿಸಲು ನೆರವಾದವರಿಗೆ ಒಂದು ಲಕ್ಷ ಬಹುಮಾನ ಇದೆ ಸಾರ್! ನೀವು ಒಂದು ಫೋನು ಮಾಡಿದ್ದರೆ ಈ ಮೊತ್ತ ನಿಮ್ಮದಾಗಿತ್ತು. ಇನ್ನೊಮ್ಮೆ ಬರಲು ನೀವು ಆಮಂತ್ರಿಸಿದ್ದರಿಂದ ಅವನನ್ನು ಹಿಡಿಯಬಹುದೆಂಬ ಆಸೆ ಚಿಗುರಿದೆ. ದಯವಿಟ್ಟು ಫೋನ್ ಮಾಡಿ ಪೊಲೀಸಿನವರೊಂದಿಗೆ ಸಹಕರಿಸಿ!

ಇನ್ನೊಂದು ವಿಚಾರ ನಗರದ ಆಸುಪಾಸುಗಳಲ್ಲಿ ವಿಪರೀತ ದರೋಡೆ ಗಳು ನಡೆಯುತ್ತಿರುವದರಿಂದ, ನಾಗರಿಕರು ವಿಚಲಿತರಾಗದೇ ಕಳ್ಳ-ಕಾಕರೊಡನೆ ಹೇಗೆ ವಿನಯದಿಂದ ವರ್ತಿಸಬೇಕೆಂದು ತಿಳಿಹೇಳಲು ತರಬೇತಿ ಶಿಬಿರ ನಡೆಸಲಿದ್ದೇವೆ. ತಾವುಗಳು ಕೃಪೆ ಮಾಡಿ ತಮ್ಮ ಅನುಭವಗಳನ್ನು ಇನ್ನಿತರರೊಂದಿಗೆ ಹಂಚಿಕೊಳ್ಳಬೇಕೆಂದು ನಮ್ಮ ನಮ್ರ ವಿನಂತಿ.

ತಮ್ಮ ಸಹಕಾರ ನಮಗೆ ವರದಾನವಿದ್ದಂತೆ
ಇಂತೀ ತಮ್ಮ ಆಗಮನಾಭಿಲಾಷಿ
ಪೊಲೀಸ ವರಿಷ್ಠಾಧಿಕಾರಿಗಳು.

ಪತ್ರ ಓದಿ ನಾವಿಬ್ಬರೂ ಗಹಗಹಿಸಿ ನಕ್ಕೆವು. ನಕ್ಕೂ ನಕ್ಕೂ ಉಕ್ಕಿದ ಕಣ್ಣೀರು ಒರೆಸುತ್ತ "ಲಕ್ಷ್ಮೀ ಆರಾಧಕರಾಗಲು ಸಾಧ್ಯವಾಗದಿದ್ದರೂ ಸರಸ್ವತೀ ಪೂಜಕರಾಗಿರುವ ತನಕ ಕಳ್ಳ-ಕಾಕರ ಭಯವೂ ಇಲ್ಲ. ಪೊಲೀಸರ ಸಂರಕ್ಷಣೆಯೂ ಬೇಕಾಗಿಲ್ಲ" ಎಂಬ ರಾಯರ ತೀರ್ಪಿನಿಂದ ನೆಮ್ಮದಿ ಯಾಯಿತು.

○

# ಹೀಗೂ ಉಂಟೆ....?



ಅಂದು ಮುಂಜಾನೆ ನಾಲ್ಕು ಗಂಟೆಗೇ ಎಚ್ಚರವಾದಾಗ, ಕಟ್ ಕಟ್ ಎಂದು ಬೆರಳಚ್ಚಿನ ಉದ್ಗಾರಗಳು ಕಿವಿಗೆ ಬಿದ್ದವು! ಓಹೋ! ರಾಯರಿಗೆ ಕನಸಿನಲ್ಲೆ ಸ್ಫೂರ್ತಿ ಬಂದುಬಿಟ್ಟಿದೆ. ಅದಕ್ಕೊಂದು ಲೇಖನದ ಮೂರ್ತರೂಪ ಕೊಡುತ್ತಿದ್ದಾರೆ, ಎಂದು ಖುಷಿಯಿಂದ ಬೈಠಕ್‌ಖಾನೆಯನ್ನಾದರೂ ಗುಡಿಸಿ, ಖುರ್ಚಿಗಳನ್ನು ಸರಿಪಡಿಸೋಣ ಎಂದು ಹೊರಗೆ ಬಂದು ನೋಡಿದರೆ ಆಗಲೇ ಡ್ರಾಯಿಂಗ್ ರೂಮು ಸುಸಜ್ಜಿತವಾಗಿದೆ! ಎಲ್ಲೊ ನಾನು ಮರೆಸಿ ಇಟ್ಟಿದ್ದ ಕಾರ್ಪೆಟ್ ನೆಲವನ್ನು ಅಲಂಕರಿಸಿದೆ! ಕೇವಲ ಆಂತರಿಕ ಸೌಂದರ್ಯ, ಮನುಷ್ಯನಿಗೆ ಮುಖ್ಯವೆಂದು ಮೂರು ಹೊತ್ತು ಭಾಷಣ ಬಿಗಿಯುವವರು, ಈ ಬಾಹ್ಯ ಸೌಂದರ್ಯದ ಕಡೆಗೂ ಗಮನವನ್ನು ಕೊಡಲು ಕಾರಣ ಏನಿರ ಬಹುದು? ಎಂದು ಊಹಿಸುತ್ತ, ಮುಖ ತೊಳೆದು ಹೊಗೆಯಾಡುವ ಕಾಫಿಯ ಲೋಟ ಕೈಗೆ ಕೊಡುತ್ತ ಏನು ಸಮಾಚಾರ ಅನ್ನೋದನ್ನ

ಅರಿಯೋಕ್ಕೆ ಪರಿಪರಿಯಿಂದ ವಿಚಾರಿಸಿದರೂ ಮೌನವಾಗಿಯೇ ತಮ್ಮ ಕೆಲಸ ಮುಂದುವರಿಸಿದರು. ಕೊನೆಗೆ ತಾಳ್ಮೆ ಕಳೆದುಕೊಂಡು, ಯಾರೋ ಅಜ್ಞಾತ ಅತಿಥಿಗಳು ಪಕ್ಕರಿಸಲಿದ್ದಾರೆಂದು ಊಹಿಸಿಯೋ, ಧ್ವನಿಯೇರಿಸಿ, "ಈ ಮನೆಯಲ್ಲಿ ನನ್ನ ಸಮ್ಮತಿಯಿಲ್ಲದೇ ಯಾವ ಆತಿಥ್ಯದ ಚಟುವಟಿಕೆ ಯನ್ನೂ ನಡೆಯಗೊಡುವದಿಲ್ಲ" ಎಂದು ಗುಡುಗಿದೆ. 'ಈ ಮನೆ, ನನ್ನದೂ ಹೌದು. ನನಗೆ ಬೇಕಾದವರಿಗೆ ಕರೆತರುವ ಅಧಿಕಾರ ನನಗೂ ಇದೆ' ಎಂದು ಸಿಡಿಲಿನ ಉತ್ತರ ಕೊಟ್ಟು ಎಲ್ಲಿಗೋ ಹೊರಟೇಬಿಟ್ಟರು. ಈ ಅನಿರೀಕ್ಷಿತ ಪ್ರಸಂಗದಿಂದ ಆತ್ಮಾಭಿಮಾನ ಕೆರಳಿದರೂ, ಎಲ್ಲಿಗೆ ಹೋದರೋ! ರವಿವಾರದ ನೆಮ್ಮದಿ ಕದಡಿಹೋಯಿತಲ್ಲಾ ಎಂದು ದುಗುಡವೂ ಪ್ರಾರಂಭವಾಯ್ತು. ಊರಲ್ಲೇ ಇರುವ ನಾದಿನಿಯ ಮನೆಗೆ ಹೋಗಿರಬಹುದೇ ? ನನ್ನ ವಿರುದ್ಧ ದೂರಿಕೊಳ್ಳಲು ನಮ್ಮಕ್ಕ ಉಷಾಳನ್ನು ಭೇಟಿ ಮಾಡಲು ಹೋಗಿರಬಹುದೇ? ತಂಗಿ ಸುಷಮಾಳಿಗೆ ಫೋನಿಸಿ ಅಲ್ಲೇನಾದರೂ ಪ್ರತ್ಯಕ್ಷರಾಗಿದ್ದಾರೆಂದು ವಿಚಾರಿಸಲೇ ? ಛೇ ! ಇವೆಲ್ಲ ಸ್ತ್ರೀ ಪುರುಷ ಸಮಾನತೆಯಲ್ಲಿ ವಿಶ್ವಾಸ ವಿಟ್ಟವರು ಮಾಡುವ ಕೆಲಸಗಳಲ್ಲ ! ಹೇಗಿದ್ದರೂ ಊಟಕ್ಕಾದರೂ ಮನೆಗೆ ಬರಬಹುದೆಂದು, ನೆಮ್ಮದಿ ಪಡೆಯಲು ಯತ್ನಿಸಿದೆ.

ಟ್ರೆನ್‌ನ್ ಕರೆಗಂಟೆ ಕಿರುಚಿತು. ಸವಾರಿ ಬಂದಿತೆಂದು ಲಗುಬಗೆಯಿಂದ ಬಾಗಿಲು ತೆಗೆದೆ. ಕಣ್ಣು ನಂಬದಾದವು. ಆ ಬೋಲಿ ಬಣ್ಣದ ಬನಾರಸಿ ಸೀರೆ ಉಟ್ಟು ಅದೇ ಬಣ್ಣದ ಕನಕಾಂಬರದ ದಂಡೆ ಮುಡಿದು ನಾದಿನಿ ಮಾಲಿನಿ, ಮದುಮಗಳಂತೆ ಕಂಗೊಳಿಸುತ್ತಿದ್ದಾಳೆ ! ಇಂದೇನು ವಿಶೇಷವೆಂದು ಬಾಯ್ತೆರೆಯುವ ಮುನ್ನವೇ ಇವಳೇ ಪೀಠಿಕೆ ಪ್ರಾರಂಭಿಸಿದಳು. "ಇದೆಂಥ ಅವತಾರ ವೈನಿ ? ವಿಶಿಷ್ಟ ಸಮಾರಂಭ ಇಟ್ಟುಕೊಂಡಿದ್ದೇವೆ. ಅತ್ಯುತ್ತಮ ಅಲಂಕಾರ, ಬಟ್ಟೆಬರೆ ಧರಿಸಿ ಬನ್ನಿ" ಎಂದು ಅಣ್ಣಾನವರು ನಿನ್ನೆ ತಾಕೀತು ಮಾಡಿದ್ದರು. ಆದರೆ ನೀವಿನ್ನೂ ಮಲಗಿದ್ದ ಬಟ್ಟೆಯಲ್ಲಿಯೇ ಇರುವಿರಲ್ಲ" ! ಎಂದು ಮೂದಲಿಸಿದಳು. ಮಾತನಾಡಲು ಬಾಯಿ ತೆಗೆಯುವ ಮುನ್ನವೇ ನನ್ನ ಹೆರಳು ಬಿಚ್ಚಿ, ಕೂದಲು ಬಾಚಿ ಅಂದವಾದ ಮುಡಿ ಕಟ್ಟಿದಳು. ಬೀರುವಿನ ಬಾಗಿಲು ತೆಗೆದು, ತಮ್ಮಣ್ಣನಿಗೆ ಇಷ್ಟವಾದ ಬಣ್ಣದ ಸೀರೆ

ತೆಗೆದು ಒತ್ತಾಯದಿಂದ ಉಡಿಸಿದಳು. ಸೆಂಟ್ ತೆಗೆದು ಹಚ್ಚಿದಳು. ತಾನು ತಂದ ಜಾಜಿ ದಂಡೆ ಮುಡಿಸಿದಳು. "ಈಗ ನೋಡಿ ಕನ್ನಡಿಯಲ್ಲಿ ಹೇಗೆ ಕಾಣಿಸುತ್ತೀರೆಂದು! ಯಾವಾಗಲೂ ಮೈಯಭಾನೇ ಇಲ್ಲದೇ ಯಾವ ಪ್ರಪಂಚದಲ್ಲಿರುತ್ತೀರೋ ಏನೋ!" ಎಂದು ಸಲಿಗೆಯಿಂದ ಹಂಗಿಸಿದಳು.

ನಂತರ ನಮ್ಮಕ್ಕ ಉಷಾ, ಎಂದಿಲ್ಲದ ಬಣ್ಣಬಣ್ಣದ ಸೀರೆ ಉಟ್ಟು ಹೂ ಮುಡಿದು ಬಂದದ್ದು ನೋಡಿ ವಿಸ್ಮಯಪಟ್ಟೆ. "ನಿನ್ನ ಯಜಮಾನರು ಬಣ್ಣದ ಛಾಯಾಚಿತ್ರಕ್ಕೆ ಹೊಂದುವಂಥ ಬಟ್ಟೆಬರೆ ಧರಿಸಲು ಸೂಚಿಸಿದ್ದರು, ಎಂದು ತನ್ನ ವಿಶೇಷ ಅಲಂಕಾರಕ್ಕೆ ವಿವರಣೆ ನೀಡಿದಳು. ಮತ್ತೆ ಕರೆಗಂಟೆ. ಈಗ ಬಂದ ತಂಗಿ ಸುಷಮಾ ಈ ಕಾರ್ಯಕ್ರಮಕ್ಕಾಗಿಯೇ ಹೊಸ ಉಡುಪು ಧರಿಸಿದಂತಿತ್ತು. ಇನ್ನೊಮ್ಮೆ ಕರೆಗಂಟೆ. ಈಗ ಬಂದಾತ ಕೊಂಕಣಿ ತೊಣಪ...."ನಾನು, ಮಾಯಿ...ಪಾಕಪ್ರವೀಣ. ಇಂದು ನಿಮ್ಮಲ್ಲಿ ೨೫ ಜನರಿಗೆ ಸುಗ್ರಾಸ ಭೋಜನ ತಯಾರು ಮಾಡಿಕೊಂಡು ಬರಲು ಕಮ್ತೀರು ಆರ್ಡರ್ ಕೊಟ್ಟಿದ್ದರು...." ಎಂದು ಆತ ಹೇಳುತ್ತಿರುವಾಗಲೇ, "ನಿಮ್ಮ ನಳಪಾಕದ ಅವಶ್ಯಕತೆ ನಮಗಿಲ್ಲ...."ಎಂದು ಬಾಗಿಲು ಮುಚ್ಚುವುದರಲ್ಲಿದ್ದೆ. ಆವನೇ ಮಾತು ಮುಂದುವರಿಸಿ "ಮಾಯ್ಯೆ, ಕಾಮತ ಮಾಮ ಮುಂಗಡ ಹಣವನ್ನೂ ಕೊಟ್ಟುಬಿಟ್ಟಿದ್ದಾರೆ. ಏನೂ ಮಾಡುವಂತಿಲ್ಲ!" ಎಂದು ನಕ್ಕು ಅನುಯಾಯಿಗಳಿಗೆ ಸನ್ನೆ ಮಾಡಿದ. ಮೊಸರೊಡೆ, ಗರಿಗರಿ ಜಿಲೇಬಿ, ಗೋಡಂಬಿ ಪಲ್ಯೆ, ಅನಾನಸ ಗೊಜ್ಜು, ಆಪ್ಪೆ ಮಿಡಿ ಉಪ್ಪಿನಕಾಯಿಗಳ ಗಮಗಮ ತುಂಬಿ ತಂದ ಪಾತ್ರೆಗಳಿಂದ ಮನೆಯಲ್ಲೆಲ್ಲ ಹೊರಹೊಮ್ಮಿತು. ಅಡಿಗೆ ಭಟ್ಟರಿಗೆ ಸಿಗದ ಸ್ವಾಗತ, ಅವರ ಅಡಿಗೆಗೆ ಧಾರಾಳವಾಗಿ ಸಂದಿತು.

ಇಷ್ಟೆಲ್ಲ ಕಾರಭಾರಮಾಡಿಗ ರಾಯರು ಬಾರದ್ದರಿಂದ ಕಸಿವಿಸಿ ಯಾಯಿತು. ಈ ಎಲ್ಲ ವ್ಯವಸ್ಥೆಯ ಹಿಂದಿನ ನಿಗೂಢ ರಹಸ್ಯ ತಿಳಿಯದೇ ದಿಙ್ಮೂಢಳಾದೆ. ಹತ್ತಾರು ಪೊಟ್ಟಣಗಳೊಂದಿಗೆ ಕೊನೆಗೊಮ್ಮೆ ರಾಯರು ಆಟೋದಿಂದ ಇಳಿದಾಗ, ಹೃದಯ ತುಂಬಿ ಬಂದಿತು. ಆದರೆ ಬೆಳಗಿನ ನೆನಪಿನಿಂದ ನಗದೇ "ಪೋಕ್ಸ್" ಆಗಿರಲು ಯತ್ನಿಸಿದೆ. ತಂದ ಪೊಟ್ಟಣಗಳನ್ನು

ಮಾಲಿನಿಗೆ ಇತ್ತು, ಅವುಗಳ ವಿತರಣೆಯನ್ನು ವಿವರಿಸಿದರು. ತಾಜಾ ಅಡಿಗೆಯನ್ನು ಬಿಸಿ ಮಾಡುವುದಕ್ಕೆ ಅವಕಾಶ ಕಲ್ಪಿಸಿ, ತಾವು ಕ್ಯಾಮರಾ ಫ್ಲ್ಯಾಶ್‌ಗಳನ್ನು ಕೈಗೆತ್ತಿಕೊಂಡರು. ಕುಡುಕನ ಕೈಗೆ ಸೆರೆಬಾಟ್ಲ್ ಕೊಡುವುದೂ, ರಾಯರಕೈಗೆ ಕ್ಯಾಮರಾ ಕೊಡುವುದೂ ಒಂದೇ ಎಂದು ನಾನು ಆಗಾಗ ಚುಡಾಯಿಸುತ್ತಲೇ ಇರುತ್ತೇನೆ. ಅದನ್ನು ಸಿದ್ಧಮಾಡಲೆಂದು ನಾನು ಕೂತಲ್ಲಿ ಕ್ಲಿಕ್ಕಿಸಲಾರಂಭಿಸಿದರು. ಅಕ್ಕ-ತಂಗಿ-ನಾದಿನಿಯರೊಂದಿಗೆ ಛಾಯ ಗ್ರಹಣವಾಯಿತು. ಛಾಯಾಗ್ರಾಹಕರೊಂದಿಗೇ ನಿಂತು ಒಂದು ಛಾಯಾಚಿತ್ರ ತೆಗೆಸಿಕೊಳ್ಳಬೇಕೆಂಬ ನನ್ನ ಕನಸು ಮಾತ್ರ ನನಸಾಗಲಿಲ್ಲ. ಎಂದಿನಂತೆ, ತಾನು ಕ್ಲಿಕ್ಕಿಸಿದ ಪ್ರತಿಚಿತ್ರದ ಹಿಂದೆಯೂ ತನ್ನ ಕೈವಾಡ ಇದ್ದೇ ಇದೆ ಎಂದು ಜಾರಿಕೊಂಡರು.

ಆರ್ಡರ್ ಕೊಟ್ಟ ಅಡಿಗೆ ಹೆಚ್ಚಾಗಿಯೇ ಇದ್ದುದರಿಂದ ಅಕ್ಕಪಕ್ಕದ ಚಿರಪರಿಚಿತರು, ಅರೆಪರಿಚಿತರು, ಅಲ್ಪಪರಿಚಿತರನ್ನೆಲ್ಲ ಆಮಂತ್ರಿಸಿದೆ. ಅವರು ನಮ್ಮೆಲ್ಲರ ಅಲಂಕಾರ ನೋಡಿ ಪೆಚ್ಚಾದರೂ, ರುಚಿಕಟ್ಟಾದ ಅಡಿಗೆ ಆತ್ಮೀಯ ಉಪಚಾರಗಳಲ್ಲಿ ಎಲ್ಲವನ್ನು ಮರೆತರು. ಊಟದ ನಂತರ ಮಾಲಿನಿ, ಹೊಸ ಸೀರೆಯ ಪೆಟ್ಟಿಗೆ ಕೈಗಿತ್ತಳು. ಸವಿದ ಮುತ್ತಿನ ಬೆಂಡೋಲೆ ತೆಗೆದು ಹೊಸವನ್ನು ತಾನೇ ತೊಡಿಸಿ ಇದು ಅಣ್ಣನ ಉಡುಗೊರೆ ಎಂದಾಗ, ಕನಸು ಕಾಣುತ್ತಿದ್ದೇನೆಯೇ ! ಎಂದು ಚೂಟಿಕೊಂಡೆ. ಅಲ್ಲವೆಂದು ಖಚಿತಪಡಿಸಿ-ಕೊಂಡೆ. ಇದೆಲ್ಲ ಸಮಾರಂಭ ಏಕೆಂದು ತಿಳಿಯದೇ, ಪೆಚ್ಚುತನ ತೋರಿಸಿ ಕೊಳ್ಳಬಾರದೆಂದು ಹೋರಾಟ ನಡೆಸಿಯೇ ಇದ್ದೆ. ಅಡಿಗೆಯವನ ಸೈನ್ಯ ಕಂಬಿಕಿತ್ತ ನಂತರ 'ಬಹಿರಂಗ ಸಭೆ' ಎಂದು ಜಾಹೀರಪಡಿಸಿ, ಒತ್ತಾಯದಿಂದ ಅಧ್ಯಕ್ಷ ಪೀಠದಲ್ಲಿ ನನ್ನನ್ನು ಕೂಡ್ರಿಸಿ ಕಾರ್ಯಕ್ರಮ ಆರಂಭಿಸಿಯೇ ಬಿಟ್ಟರು.

ಪ್ರಥಮ ಮಾತುಗಾತಿ, ನಮ್ಮಕ್ಕ ಮೆಲುದನಿಯಲ್ಲಿ ಪ್ರಾರಂಭಿಸಿದಳು. "ಈ ತಂಗಿಯ ಬಗ್ಗೆ ನನಗೆ ಅಪಾರ ಪ್ರೀತಿ. ಅಭಿಮಾನಗಳಿವೆ. ಅವಳು ಸ್ವಭಾವದಲ್ಲಿ ರುದ್ರಾಂಬಿಕೆ, ರೂಪದಲ್ಲಿ ಚಂಡಿ-ಚಾಮುಂಡಿ, ಕೊಂಕಣಿ ಚಾಂದಬೀಬಿ, ಹೆಣ್ಣು ಹುಲಿ. ನಾನು ನಾಯಿಯನ್ನು ಕಂಡರೆ ಹೆದರಿ ಹೋಗುವ ದಿನಗಳಲ್ಲಿ ಅವಳು ಹುಲಿಯೊಡನೆ ಹೋರಾಡಬಲ್ಲ, ನಾಯಿ-ಯೊಂದಿಗೆ ಸ್ಕೂಲಿಗೆ ಹೋಗಿಬರುತ್ತಿದ್ದಳು. ಇನ್ನು ಹುಲಿಯ ಚಿಕ್ಕಪ್ಪ

ನೆನಿಸಿಕೊಳ್ಳುವ ಬೆಕ್ಕುಗಳು ನಾನು ಬೆಚ್ಚಿ ಬೀಳುವಂಥವು. ಅವಳ ಹಾಸಿಗೆಯಲ್ಲೆ ಮಲಗುತ್ತಿದ್ದವು. ಇಂದು ಕ್ರಿಕೆಟ್ ಆಡುವ ಹೆಂಗಳೆಯರು ಸಾಕಷ್ಟು ಸಿಗಬಹುದು ಆದರೆ ಅರೆಶತಕದ ಹಿಂದೆಯೇ ಈ ಧೀರೆ ಕೈಯಲ್ಲಿ ಬ್ಯಾಟ್ ಹಿಡಿದು ರಾಜಾರೋಷ ಫೋಟೊಸ್ಟುಡಿಯೋದಲ್ಲಿ ತೆಗೆಸಿಕೊಳ್ಳುವ ಎದೆಗಾರಿಕೆ ತೋರಿಸಿದ್ದಳು !" ಎಂದಾಗ ಪುರುಷರೆಲ್ಲ ಜೋರಾಗಿ ಚಪ್ಪಾಳೆ ತಟ್ಟಿದರು.

ಈಗ ಮಾಲಿನಿಯ ಸರದಿ, "ನಮ್ಮಣ್ಣನ ಜೊತೆ ಬಾಳ್ವೆ ಮಾಡುವುದು ಸಣ್ಣ ಸಾಧನೆಯೇನಲ್ಲ ! ಅವರಿಗೆ ವಿದೇಶೀ ಶಿಷ್ಯವೇತನ ಲಭಿಸಿದಾಗ, ಅಮೇರಿಕೆಗೆ ಹೋಗುವಾಗ, ನ್ಯೂಯಾರ್ಕ್ ವಿಶ್ವವಿದ್ಯಾಲಯದ ಡಾಕ್ಟರೇಟು ಕೊಟ್ಟಾಗ, ವಿದ್ಯಾವತಿಯನ್ನು ಪತ್ನಿಯಾಗಿ ಪಡೆದಾಗ, ಏಕಮೇವ ಪುತ್ರನನ್ನು ಪಡೆದಾಗ, ಒಂದು ಬಿಡಿ ಕಾಸೂ ಖರ್ಚು ಮಾಡಿದವರಲ್ಲ ! ಒಂದು ನರಪಿಳ್ಳೆಗೂ ಚಹಾ–ಕಾಫಿ ಕೊಡಿಸಿದವರಲ್ಲ. ಅಂಥವರು ಇವತ್ತು ಇಂಥ ಭರ್ಜರಿ ಊಟ ಹಾಕಿಸಿದರೆಂದರೆ ಏನೋ ಇಂಗಿತಾರ್ಥವಿದೆ !" ಎಂದಾಗ ಎಲ್ಲರೂ ಗಹಗಹಿಸಿ ನಕ್ಕರು.

ತಂಗಿ ಸುಷಮಾ ನಿರ್ವಿಕಾರವಾಗಿ, "ನಮ್ಮಕ್ಕ ಬಲು ಜೋರು. ಧಾರವಾಡ ಪೇಡೆ ತಂದುಕೊಟ್ಟು ಮುದ್ದು ಮಾಡಿದರು, ನನ್ನ ಆಟ–ಪಾಠ, ವಿದ್ಯಾಭ್ಯಾಸಗಳನ್ನೆಲ್ಲ ಕಠಿಣವಾಗಿ ನಿಯಂತ್ರಿಸುತ್ತಿದ್ದರಿಂದ ದೇವರೆ ! ಇವಳಿಗೆ ಬೇಗ ಮದುವೆಯಾಗಿ ಮನೆಬಿಟ್ಟು ಹೋಗುವಂತಾಗಲಿ ! ಎಂದು ದೇವರನ್ನು ಪ್ರಾರ್ಥಿಸಿಕೊಳ್ಳುತ್ತಿದ್ದೆ. ಆದರೆ ಮದುವೆಯ ನಂತರ ಅವಳ ಶೋಚನೀಯ ಸ್ಥಿತಿಯ ಬಗ್ಗೆ ಕಳವಳ ಪಡುವಂತಾಯಿತು. ಅವಳು ನನ್ನ ಮೇಲೆ ಮಾಡಿದ ದಬ್ಬಾಳಿಕೆಗಿಂತ ನಮ್ಮ ಭಾವನವರು ಹೆಚ್ಚಿನ ಭಯಂಕರ ಶಿಸ್ತಿನಿಂದ ಅವಳನ್ನು ತರಾಟೆಗೆ ತೆಗೆದುಕೊಂಡರು ! ಸ್ವಲ್ಪದರಲ್ಲಿ ಹೇಳಬೇಕೆಂದರೆ ಮದುವೆಯ ಮೊದಲು ಹುಲಿ ನಂತರ ಮೂಗಿಲಿಯಂತೆ ನಮ್ಮಕ್ಕ ಮೆತ್ತಗಾದರು" ಎಂದಾಗ ನೆರೆದವರೆಲ್ಲ ಅಯ್ಯೋ ಪಾಪ ! ಎಂದು ಉದ್ಗರಿಸಿದರು. ನೆರೆಮನೆಯ ವೇಣೂ ತಾಯಿ ಗಾಂಭೀರ್ಯದಿಂದ, "ನಾವು ಕಾಮತ ದಂಪತಿಗಳ ನೆರೆಯುವರಾಗಿ

ಇರಲಾರಂಭಿಸಿದಾಗ ನಮಗೆ ಅವರ ಬಗ್ಗೆ ಹೆಚ್ಚು ಏನೂ ತಿಳಿದಿರಲಿಲ್ಲ. ಮೊದಲಲ್ಲಿ ಜ್ಯೋತ್ಸ್ನಾ ಎಂದು ಕಾಮತರು ಕರೆದಾಗ ಚಿಕ್ಕ ಕೀರಲು ಧ್ವನಿ ಉತ್ತರಿಸುತ್ತಿದ್ದರಿಂದ ಮಗನ ಜೊತೆಗೆ ಮಗಳೂ ಇರಬಹುದು, ಕಾಮತರಿಗೆ ಮಗಳೆಂದರೆ ಜಾಸ್ತಿ ಪ್ರೀತಿ ಅಂದುಕೊಂಡಿದ್ದೆ. ಇಂದಿಗೂ ಅವರೀರ್ವರ ಅಡಿಗೆ ಮನೆ ಸಂವಾದ, ನಮಗೆ ತಂದೆ–ಮಗಳ ನಡುವಿನದೆಂದು ಭ್ರಾಂತಿ ಹುಟ್ಟಿಸುತ್ತದೆ. ಈ ಮಹಾಮೌನಿ ಸಾಹೇಬರಿಗೆ, ಪತ್ನಿಯೊಡನೆ ಮಾತ–ನಾಡುವುದು ಇಷ್ಟೊಂದು ಏನು ಇರುತ್ತದೆ ಎಂದು ಅರಿವಾಗುವದೇ ಇಲ್ಲ !" ಎಂದಾಗ ಅಧ್ಯಕ್ಷಿಣಿ ಗಾಂಭೀರ್ಯ ಮರೆತು ಪಿಸಕ್ಕನೆ ನಕ್ಕಳು.

ರೇಖಾರಾಣಿ, "ಮುಕ್ಕಾಲುದಿನ ಬೀಗವಿರುವ ಈ ಮನೆಯಲ್ಲಿ ಯಾವ ಐಷಾರಾಮದ ಸಾಮಾನೂ ಇಲ್ಲದಿದ್ದರೂ ನಗೆ–ಮಾತುಕತೆ, ಗದ್ದಲ ನಡೆದೇ ಇರುತ್ತವೆ. ಇವರ ಅಡಿಗೆ ಮನೆಯಿಂದ ಆಗಾಗ ಹೊರಸೂಸುವ ಗಮಗಮ ವಾಸನೆಯಿಂದಲೇ ನಾವು ಎರಡು ತುತ್ತು ಉಣ್ಣುವಂತಾಗುತ್ತದೆ ! ಒಮ್ಮೆ ಗರಂಮಸಾಲೆ ಪರಿಮಳಕ್ಕೆ ಬಾಯಿ ನೀರೂರಿ ಯಜಮಾನರು, ಕಾಮತ ಬಾಯಿಯಿಂದ ಅಡಿಗೆ ಕಲಿ ಎಂದಾಗ, ಬೆಲ್ ಮಾಡಿ ಒಳಗೆ ಬಂದು ನೋಡಿದರೆ ಅಡಿಗೆ ಮನೆಯಲ್ಲಿ ಸೌಟು ಹಿಡಿದು ನಿಂತವರು ಕಾಮತ ಸಾಹೇಬರಾಗಿದ್ದರು ! ಪತ್ನಿ ಟೂರ ಮೇಲೆ ದಿಲ್ಲಿಗೆ ಹೋಗಿದ್ದಾಳೆ ಎಂದು ಸಂತೈಸಿದರು" ಎಂದಾಗ ಎಲ್ಲರೂ ತಲೆದೂಗಿದರು.

ಎಲ್ಲರ ಭಾಷಣ ಕೇಳುತ್ತಿದ್ದ ರಾಯರು ಮಾತನಾಡಲು ನಿಂತಾಗ, ಎಲ್ಲರೂ ಸಮಾರಂಭದ ಹಿಂದೆ ಇದ್ದ ಉದ್ದೇಶ ಅರಿಯಲು ಎರಡು ಕಿವಿ ಹತ್ತು ಮಾಡಿಕೊಂಡು ಕೇಳಲಾರಂಭಿಸಿದರು. 'ಐದು ದಶಕಗಳ ಹಿಂದಿನ ಘಟನೆ ! ನಾನು ಶಾಲೆಯಿಂದ ನೇರ ಮನೆಗೆ ಹೋಗದೇ ದಾರಿಯಲ್ಲೇ ಇದ್ದ ಭವ್ಯ ಆಲದ ಮರದ ಕೆಳಗೆ ಪಾಠಚೀಲ ಒಗೆದು ಬೀಳಲು ಹಿಡಿದು ಜೋಕಾಲಿಯಾಗಿ ತೂಗಿಕೊಳ್ಳುತ್ತಿದ್ದೆ. ಈಗ ನೀವೆಲ್ಲ ವರ್ಣಿಸಿದ "ಹುಡುಗಿ" ಅದೇ ದಾರಿ–ಯಿಂದ ಹೊರಟಿದ್ದಳು. ಅವಳ ನಡಿಗೆ, ಉಡಿಗೆ, ತೊಡಿಗೆ ಮೆಚ್ಚಿಗೆಯಾದವು. ಅವಳು ನನ್ನನ್ನು ವಿಚಿತ್ರ ಪ್ರಾಣಿಯೆನ್ನುವಂತೆ ಕೆಕ್ಕರಿಸಿ ನೋಡಿದರೂ, ಇವಳನ್ನೇ ಬಾಳ ಸಂಗಾತಿ ಮಾಡಿಕೊಂಡರೆ ಹೇಗೆ ?

ಎಂದುಕೊಂಡೆ. ಅವಳು ಯಾರೆಂದು ತಿಳಿಯದು, ಎಲ್ಲಿಂದ ಬಂದವಳೆಂದೂ ತಿಳಿಯದು. ಊರವಳಲ್ಲವೆಂದು ಗೊತ್ತಿದ್ದರೂ ಎಲ್ಲಿ ಹೋದಳೆಂದು ತಿಳಿಯದು. ಆದರೂ ಅವಳನ್ನು ವರಿಸುವ ಹಟತೊಟ್ಟೆ. ಆದರೆ ಕುಟುಂಬದ ಜವಳಿ ವ್ಯಾಪಾರ ಕೈಕೊಂಡರೆ ಇಂಥವಳು ಸಿಗುವುದಿಲ್ಲವೆಂದು, ವಿದ್ಯಾಬುದ್ಧಿ-ಯತ್ತ ಗಮನ ಹಾಕಬೇಕಾಯ್ತು. ಆಕೆ, ನಾನಿದ್ದ ಕಾಲೇಜೇ ಸೇರಿದರೂ ವಿಷಯಗಳು ಬೇರೆ ಆಗಿ ಎಂದಾದರೊಮ್ಮೆ ದೂರದಿಂದಲೇ ನೋಡಿ ತೃಪ್ತಿಪಡಬೇಕಾಗಿತ್ತು. ಪದವೀಧರನಾದೆ, ಸ್ನಾತಕೋತ್ತರ ಪದವಿ ಪಡೆದೆ. ಆದರೆ ಅವಳೂ ಇವನ್ನೆಲ್ಲ ಸಾಧಿಸಿದ್ದರಿಂದ, ಇದೇನು ಮಹಾ ! ಎಂದು-ಕೊಳ್ಳಬಹುದೆಂದು ಅಮೇರಿಕೆಯ ಉಚ್ಚ ಶಿಕ್ಷಣ ಪಡೆದ 'ಶಾಣ್ಯ' ಎಂದು ಒಪ್ಪಬಹುದೆಂದು, ಆ ದೇಶಕ್ಕೆ ಧಾವಿಸಿದೆ. ಡಾಕ್ಟರೇಟೂ ಪಡೆದೇ ತಿರುಗಿ ಬಂದಾಗ ಅವಳ ಪಿತರೂ ಒಳ್ಳೆಯ ವರ ಹುಡುಕಿ ಹುಡುಕಿ ಕಂಗಾಲಾಗಿದ್ದರಂತೆ. ಯಾರನ್ನು ನೋಡಿದರೂ, ಏನು ಮಹಾ ! ಎಂದು ತನ್ನ ಗಿಡ್ಡಮೂಗನ್ನು ಸದಾ ಮುರಿಯುವಳಂತೆ ! ಆದರೆ ನೋಡಿ, ನನ್ನ ಹೆಸರು ಹೇಳಿದಾಗ, ಆಸಕ್ತಿ ತೋರಿಸಿದಳಂತೆ ! ಪರ್ವತರಾಜ, ಹೆಣ್ಣು ಇಲಿಗೆ ಮದುವೆ ಮಾಡಹೊರಟು, ಇಂದ್ರ-ಚಂದ್ರರನ್ನೂ ಆಕೆ ಒಲ್ಲದೇ ಕೊನೆಗೆ ಮೂಕರಾಜನನ್ನೇ ಮೆಚ್ಚಿ ವರಿಸಿದ ಕತೆ ನಿಮಗೆ ಗೊತ್ತಿರಬಹುದು. ಹೀಗಾಗಿ ನನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು. ನಾನು ಈ ಹೆಣ್ಣು ಇಲಿ-ಅಲ್ಲಲ್ಲ-ಹೆಣ್ಣು ಹುಲಿಯನ್ನು ಆಲದ ಮರಕ್ಕೆ ಜೋತುಬಿದ್ದು, ನೋಡಿಕೊಂಡ ದಿನದ ಅರ್ಧ ಶತಮಾನ ವನ್ನು ಆಚರಿಸಲೆಂದೇ ಈ ಭೋಜನ ಮತ್ತು ಸಂತೋಷ ಕೂಟಗಳು ! ಎಂದು ರಹಸ್ಯ ಸ್ಫೋಟ ಮಾಡಿದಾಗ ಎಲ್ಲರ ಮಾರಿಮ್ಯಾಲೂ ನಗೆತುಂಬಿದ ಆಶ್ಚರ್ಯದ ಗೆರೆಗಳು.

○

# ಕಗ್ಗತ್ತಲೆಯಲ್ಲಿ ತಿರುಗಾಟ



ನನ್ನ 'ಅನಾರೋಗ್ಯಧಾಮ'ದ ಸಕಲ ಸಮಸ್ಯೆಗಳಿಂದ ಮುಕ್ತಿ ಪಡೆಯಲು ತಿರುಗಾಟ ಒಂದೇ ರಾಮಬಾಣ ಔಷಧವಾಗಬಲ್ಲದು, ಎಂದು ತಜ್ಞ ವೈದ್ಯರು ಸಲಹೆ ನೀಡಿದ್ದರಿಂದ ನಸುಕಿನ ಸುಖ ನಿದ್ರೆಗೆ ತಿಲಾಂಜಲಿ ಕೊಡಲೇ ಬೇಕಾಯಿತು. 'ಜೀವಂತ ಗಡಿಯಾರ'ವೇ ಮನೆಯಲ್ಲಿದ್ದರಿಂದ ಎದ್ದೇಳಿಸುವದಕ್ಕಾಗಿ ಕಿರುಚುವ ಅಲಾರಂ ಗಡಿಯಾರಕ್ಕಾಗಲಿ, ಟೆಲಿಫೋನ್ ಕರೆಗಂಟೆಗಾಗಲಿ, ಶರಣು ಹೋಗುವ ಪ್ರಮೇಯ ಬರಲಿಲ್ಲ. ಪ್ರತಿದಿನ 3 ಗಂಟೆಗೇ ಏಳುವವರು ಈಗ 2½ಗೆ ಏಳಲಾರಂಭಿಸಿದರು. ಝಗ ಝಗಿಸುವ ವಿದ್ಯುದ್ದೀಪಗಳಿಂದ ನನ್ನ ನಸುಕಿನ ಸಕ್ಕರೆ ನಿದ್ರೆ ಹಾಳಾಗಬಾರದು, ಎಂದು ಮೋಂಬತ್ತಿ ಉರಿಸುವರು. ಅವರಿಗೆ ಕಗ್ಗತ್ತಲಿನಲ್ಲಿ ಓಡಾಡಿ ರೂಢಿ ಇದೆ. ಆದರೆ ನಾನು ಮನೆ ತುಂಬ ಸಿಕ್ಕಾಪಟ್ಟೆ ಹರಡಿ ಹಾಕಿದ ಟೀಪಾಯ್, ಸ್ಟೂಲ್, ಖುರ್ಚಿಗಳಿಗೆ ತಾವು ಡಿಕ್ಕಿಹೊಡೆದು, ಅವುಗಳ ಕಾಲುಗಳು ಮುರಿದು ಹೋಗ

ಬಾರದೆಂದು ಈ ಮುನ್ನೆಚ್ಚರಿಕೆ ! ಅಡಿಗೆ ಮನೆಯಲ್ಲಿ ಇದ್ದ ಬಿದ್ದ ಚೂರು, ಕಾಳುಗಳ ಮೃಷ್ಟಾನ್ನ ಭೋಜನ ನಡೆಸಲು ಬಂದ ಜಿರಳೆಗಳನ್ನು ಕೈಯಲ್ಲಿ ಹಿಡಿದ ರಟ್ಟಿನ ತುಂಡನ್ನೇ ವಜ್ರಾಯುಧದಂತೆ ಬಳಸಿ ಅವನ್ನು ಯಮಸದ ನಕ್ಕೆ ಕಳಿಸಿದ ಮೇಲೆಯೇ ರಾಯರಿಗೆ ಪ್ರಾತರ್ವಿಧಿಗೆ ಬಿಡುವು. ಪುತ್ರನಿಗೆ ಪತ್ರ, ಪತ್ರಿಕೆಗೆ ಲೇಖನ, ಪುಸ್ತಕದ ಅಧ್ಯಾಯಗಳು ಇತ್ಯಾದಿಯಾಗಿ ಬರೆಯ ಬೇಕೆಂದು ಹಿಂದಿನ ರಾತ್ರೆ ನಿರ್ಧರಿಸಿ ಮಲಗಿದರೂ ಎದ್ದ ಬಳಿಕ ಬೇರೆ ಕೆಲಸ ಗಳತ್ತ ಲಕ್ಷ್ಯಹಾಕುವದೇ ಹೆಚ್ಚು! ಶುಭಾಶಯಗಳನ್ನು ತಯಾರಿಸುವದರಲ್ಲೋ ಬಟ್ಟೆಯ ಮೇಲೆ ಚಿತ್ತಾರಗಳನ್ನು ಬಿಡಿಸುವದರಲ್ಲೋ ಮೈಮರೆತು ಬಿಡುತ್ತಾರೆ.

ಆಗೊಮ್ಮೆ ಈಗೊಮ್ಮೆ ಬೆಡ್‌ರೂಂನಲ್ಲಿ ಹಣಕಿ ಹಾಕಿ ಪತ್ನಿ ಎಚ್ಚರ ಗೊಂಡಿದ್ದಾಳೆಯೇ ? ಎಂದು ಪರೀಕ್ಷಿಸುತ್ತಾರೆ. ಸೂರು ಹಾರಿ ಹೋಗು ವಂತೆ ಮುಂದರಿಯುವ ಗೊರಕೆಯ ಸದ್ದಿನಿಂದ ನೆಮ್ಮದಿಯ ನಿಟ್ಟುಸುರು ಬಿಡುತ್ತಾರೆ. ಸ್ವಲ್ಪ ಹೊತ್ತಾದ ಮೇಲೆ ರಾಯರಿಗೆ ಉಭಯ ಸಂಕಟ. ಮುಂಜಾವು ಹರಿಯುವದರಲ್ಲಿ ಇದ್ದುದದರಿಂದ, ಪತ್ನಿಯನ್ನು ಎಬ್ಬಿಸಲೇಬೇಕು. ಆದರೆ ದಿನವಿಡೀ ದುಡಿದು, ಮಗುವಿನಂತೆ ನಿದ್ರಿಸುತ್ತಿರುವ ಮಡದಿಗೆ ಎದ್ದೇಳು ! ಎಂದು ಆಜ್ಞಾಪಿಸುವುದು ಹೇಗೆ ? ರಾಯರು ಕಳ್ಳ ಬೆಕ್ಕಿನ ಹೆಜ್ಜೆ ಯಿಡುತ್ತಾ, ಅಡಿಗೆ ಮನೆಯತ್ತ ಸರಿದು, ಎರಡು ಕಪ್ ಘಮಘಮಿಸುವ ಕಾಫಿಯನ್ನು ತಯಾರಿಸಿ ಒಂದನ್ನಷ್ಟೆ ಸವಿಯಲಾರಂಭಿಸುತ್ತಾರೆ. ಕಾಫಿಯ ಸುವಾಸನೆ ಮತ್ತು ತೃಪ್ತಿಯಿಂದ ಸವಿಯುತ್ತಿರುವ ಸದ್ದು ಕೇಳಿಸಿಕೊಂಡಾ ಗಲೂ ನಿದ್ರೆ ಮುಂದರಿಸುವದು ಸಾಧ್ಯವೇ ? ಎದ್ದು ಕಾಫಿ ಕುಡಿದರೂ ಕಗ್ಗತ್ತ ಲಿನ ಚಳಿಯಲ್ಲಿ ಬೆಚ್ಚಗಿನ ಮನೆ ಬಿಟ್ಟು ಹೊರಗೆ ಕಾಲು ಹಾಕಲು ಮನಸ್ಸು ಬಾರದು. ಅಂತೆಯೇ ತಿರುಗಾಟ ತಪ್ಪಿಸಲು ನಾನು ಮುಂದೆ ಮಾಡುವ ಕುಂಟು ನೆಪಗಳನ್ನು ನೆನೆಸಿಕೊಂಡರೆ ಆ ನಂತರ ನಾಚಿಕೆಯೆನಿಸುತ್ತದೆ. "ಮಳೆ ಬರೋ ಹಾಗಿದೆ ಅಲ್ರೀ ! ಬಾಲ್ಕನಿಯಿಂದ ಕೈ ಚಾಚಿ ಮರದಿಂದ ಅಪ್ಪಿತಪ್ಪಿ

ೀಳುವ ಇಬ್ಬನಿಯು ಹನಿ ಹಿಡಿದು ತೋರಿಸುತ್ತೇನೆ. “ರಾತ್ರಿ ಮಳೆ ಬಿದ್ದಿ ಲ್ಲ ! ರಸ್ತೆಯಲ್ಲ ಕೆಸರು ರಾಚುತ್ತಿರಬೇಕು,” ಬೆಂಗಳೂರಿನಲ್ಲೆ ಸುಮಾರಾಗಿ ುಸ್ಥಿತಿಯಲ್ಲಿರುವ ಮಲ್ಲೇಶ್ವರಂ ರಸ್ತೆಗಳನ್ನು ಅಲಕ್ಷಿಸಿ ನನ್ನ ಟಿಪ್ಪಣಿ. ಮೈ ೂರೆಯುವ ಗಾಳಿ ಚರ್ಮವನ್ನೆಲ್ಲ ಒರಟು ಮಾಡುತ್ತದೆ ! “ಆದಾಗಲೇ ಾಹನಗಳ ಓಡಾಟ ಪ್ರಾರಂಭವಾಗಿದೆಯಲ್ರೀ ! ಪೆಟ್ರೋಲ್ ಹೊಗೆ ನೇರ ೂಗಿನೊಳಗೇ ತೂರುತ್ತದೆ, ಹಿಂದಿರುಗಿ ಬರುವಾಗ ಹಾಲಿನವನು ಬಂದು ಾಗೇ ಹೊರಟು ಹೋದರೆ........ಇದಕ್ಕೆ ಕ್ರಮವಾಗಿ ರಾಯರು, “ಕೊಡೆ ಗೆದುಕೋ· ನಿನ್ನ ಜಾರದ ರಬ್ಬರ್ ಚಪ್ಪಲು ಧರಿಸು, ಶಾಲು ಹೊದ್ದುಕೋ, ೂಗು ಮುಚ್ಚಿಕೋ, ಹಾಲು ಹೊರಗಿನಿಂದ ತಂದು ಕೊಡುತ್ತೇನೆ” ಂದು ಉತ್ತರಿಸುತ್ತ ತಾವು ಬಟ್ಟೆ ಸಾಕ್ಸ್, ಶೂ ಧರಿಸಿ ಹೊರಟು ನಿಲ್ಲು ತ್ತಾರೆ. ನಂತರ “ಅಡ್ಡಿ ಆತಂಕಗಳು ನೂರಾರು ಇವೆ. ಹೊರಡಲು ಒಂದೇ ಂದು ದೃಢ ಮನಸ್ಸು ಸಾಕು” ಎಂದು ಅನಿಸಿಕೊಂಡ ಮೇಲೆ ತಿರುಗಾಟಕ್ಕೆ ಎನ್ನಲು ಬಾಯಿ ಹೇಗೆ ಬಂದೀತು ?

ನಮ್ಮ ಬಹುಮಹಡಿಯ ಕಟ್ಟಡದ ತೊಂಭತ್ತು ಕುಟುಂಬಗಳು ಸುಖ ದ್ರೆಯಲ್ಲಿರುವಾಗ ಅರೆನಿದ್ರೆಯ ಚೌಕಿದಾರನಿಂದ ಗೇಟು ತೆಗೆಸಿ “ರಾಜರಾಣಿ” ುರಂತೆ ಕೈಬೀಸುತ್ತ ತಿರುಗಾಟಕ್ಕೆ ಹೊರಡುವುದೇ ಒಂದು ಸಾಹಸದ ಸಾಧನೆ ನ್ನಬೇಕು. ಕರ್ತವ್ಯಪಾಲನೆಯ ಅವಧಿಯಲ್ಲಿ ನಿದ್ರಿಸುವದು ಮೇಲ್ ಅಧಿಕಾರಿ ಳ ಗಮನಕ್ಕೆ ಬಾರದಿರಲಿ, ಎಂದು ನಡುರಾತ್ರಿಯಲ್ಲಿ ಜಲಬಾಧೆಗೆ ಎದ್ದಾಗಲೇ ೇಟಿನ ಬೀಗ ತೆಗೆದಿಡುವ ಒಬ್ಬಿಬ್ಬ ಭೂಪ ದ್ವಾರಪಾಲಕರೂ ಇದ್ದಾರೆ ! ವಾರದಿಂದ ಹೊರ ಬೀಳುತ್ತಿದ್ದಂತೆ ಒಡವೆ, ವಾಚು, ಹಣ ಮುಂತಾದ ಾವ ಬೆಲೆಯುಳ್ಳ ಸಾಮಾನು ಮೈಮೇಲೆ ಇಲ್ಲವೆಂದು ರಾಯರು ಖಚಿತ ಡಿಸಿಕೊಳ್ಳುತ್ತಾರೆ. ಇವೆಲ್ಲ ಕೈಬಿಟ್ಟಾವು ! ಎಂಬ ಪರಿವೆ ಇಲ್ಲದವರು. ದರೆ ಕೈಕಾಲು, ಕಣ್ಣು, ಮೂಗುಗಳಿಗೆ ಪೆಟ್ಟು ಬೀಳಕೂಡದು, ಪ್ರಾಣಾ ಾಯ ಸಲ್ಲದು ಎಂಬ ಮುನ್ನೆಚ್ಚರಿಕೆ, ರಾಯರ ಸ್ವಾಭಾವವನ್ನು ಅರಿಯದ ರಿಗೆ ಮನವರಿಕೆ ಮಾಡಿಕೊಡುವದು ಬಿಗಿಯಾದ ಕೆಲಸವೇ ! ಮೊದಲಿ

ನಿಂಪಲೂ ಚೈನು, ಉಂಗುರ, ವಾಚು ಧರಿಸುವ ಪರಿಪಾಠವಿಲ್ಲ. ಜೇಬಿನಲ್ಲಿರುವ ಚಿಲ್ಲರೆ ಹಣ ತೆಗೆದು ಡಾಯನಿಂಗ್ ಟೇಬಲ್ ಮೇಲೆ ಇಡುತ್ತಾರೆ. ಇಂದಿನ ದಿನಗಳಲ್ಲಿ ಯಜ್ಞೋಪವೀತದ ಬೆಲೆಯೂ ಹೆಚ್ಚಾಗಿದೆ ಎಂದು ಅದನ್ನು ತೆಗೆದಿಟ್ಟು ಹರಿದುದನ್ನು ಸದ್ಯ ಧರಿಸುವುದಿಲ್ಲ ! ಬಂಗಾಲಿಗಳು ಧರಿಸುವ ಶಂಖದ ಅಥವಾ ಅರಗಿನ ಬಳೆ ನಾನು ಧರಿಸಬೇಕು. ಮಧ್ಯಪ್ರದೇಶದ ಆದಿವಾಸಿಗಳು ಸಿದ್ಧಪಡಿಸಿದ ಮಣಿಸರಕೆ ೂರಳಿಗೆ, ಆಕಾರ ಭ್ರಷ್ಟವಾದ ದಪ್ಪ ಹಳೇ ಚಪ್ಪಲಿ ಕಾಲಿಗೆ ಧರಿಸುವಂತೆ ನೋಡಿಕೊಳ್ಳುವರು. ಇದರಿಂದಾಗಿ ನಿಂತವರಿಗೆ, ಸಾಯಕಲ್ ತುಳಿಯುತ್ತ ಹಿಂಬಾಲಿಸುವವರಿಗೆ, ಸನಿಹದಲ್ಲೇ ಗಕ್ಕನೆ ನಿಂತು ತಿರುಗಿಸುವ ಆಟೋದವರಿಗೆ ಸೊಪ್ಪು. ಹಾಕದೇ ಹದಿ ಹರೆಯುದವರಂತೆ ಹರಟೆ ಹೊಡೆಯುತ್ತ, ನಗುತ್ತ, ಸುತ್ತ ಮುತ್ತಲ ನೋಟಗಳ ಮೇಲೆ ಟಿಪ್ಪಣಿ ಮಾಡುತ್ತ ಮುಂದರಿಯಬಹುದು. ನಸುಕಿನ ತಿರುಗಾಟಕ್ಕೆ ಹೊರಡುವ ಇಳಿವಯಸ್ಸಿನ ಜೋಡಿಗಳು ಇಲ್ಲದಿಲ್ಲ. ಆದರೆ ಒಂದೇ ಸಮನೆ ಮಾತನಾಡುತ್ತ ಹೋಗುವ ನಮ್ಮಂಥವರು ವಿರಳವೇ !

ಎದುರಿನ ಮರದಲ್ಲಿ ಸರ್ ಸರ್, ಸದ್ದಾದಾಗ, ವೇಗವಾಗಿ ಹೊರಟ ತಮ್ಮ ಶರೀರವಾಹನಕ್ಕೆ ಗಕ್ಕೆಂದು ಬ್ರೇಕ್ ಹಾಕಿ, ಎದುರಿನಿಂದ ಹಾರಿ ಹೋದ ಪ್ರಾಣಿ ಯಾವುದು ? ಎಂದು ಕೇಳುವರು. 'ಯಾವುದೋ ಒಂದು ನಿಶಾಚರಹಕ್ಕಿ!' ಸೋಲೊಪ್ಪದೆ ನುಡಿಯುವೆ. ಅಯ್ಯೋ ನನ್ನ ಅದೃಷ್ಟವೇ ! ಅದು ಹಕ್ಕಿಯೇ ಅಲ್ಲ. ಮನುಷ್ಯನಂತೆ ಸಸ್ತನಿ, ಕಣ್ಣು ಕಪ್ಪಡಿ ಎಂದು ವಿವರಿಸುವರು. ಕಣ್ಣು ಕಪ್ಪಡಿ ನನಗೆ ಗೊತ್ತಿಲ್ಲವೇನ್ರಿ ? ಅದಕ್ಕೆ ಅತ್ತಿಯ ಹಣ್ಣ್ರು ಎಂದರೆ ಬಲು ಪ್ರೀತಿ, ಕತ್ತಲಲ್ಲಿ ಕೂಡಲೇ ಕಾಣಲಿಲ್ಲ" ಎಂದು ಹಾರಿಕೆಯ ಉತ್ತರ ಕೊಡುವೆ. ಅಷ್ಟರಲ್ಲಿ ವಿದ್ಯುತ್ ತಂತಿಯ ಮೇಲೆ ವಿರಾಜಿಸುತ್ತಿದ್ದ ಜೀವಿಯೊಂದು ಹಾರುತ್ತ ಬಂದು ಕೀಟವೊಂದನ್ನು ಚುಂಚಿನಲ್ಲಿ ಬಂಧಿಸಿ ಸ್ವಸ್ಥಾನಕ್ಕೆ ಮರಳಿತು. ಇದೇನೆಂದು ಹೇಳು ನೋಡೋಣ ? ಎಂದು ಸವಾಲು ಬರುವದು. ಇದೂ ಕಣ್ಣು ಕಪ್ಪಡಿ ಎಂದಾಗ, "ಅಲ್ಲ, ಗೂಬೆಯ ಮರಿ ಕಣೆ, ಸನಿಹದ ಮರದ ಪೊಳ್ಳಿನಲ್ಲಿ ಮೂರು ನಾಲ್ಕು ಮರಿಗಳನ್ನು ಹಾಕಿಗಳನ್ನು ಹಾಕಿರಬೇಕು, ಹಸಿದ ಮರಿ ಇಲ್ಲಿಯ ತನಕ ಬಂದು ತಿರುಗಿ ಹಾರಿಹೋಗಿದೆ' ಎಂದು ವಿವರಿಸುವರು.

"ಅದೇಕೋ ಕೋಗಿಲೆಗಳು ಇನ್ನೂ ಎದ್ದಿಲ್ಲ" ಎಂದು ಮರಗುತ್ತಿದ್ದಂತೆ, ಕಿರ್, ಕಿರ್, ಕಿರ್‌ರ್ ಎಂದು ಹೆಣ್ಣು ಪಕ್ಷಿಯೊಂದು ಕರೆಕೊಟ್ಟಾಗ, ತಾವೂ ಎಚ್ಚರವಾಗಿಯೇ ಇದ್ದೇವೆ, ಎಂದು ಗಂಡು ಹಕ್ಕಿಗಳು ಉತ್ತರಿಸಿದವು. ಮಾವಿನ ಮರದಲ್ಲಿ ಆಶ್ರಯ ಪಡೆದದ್ದು ಯುವಕೋಗಿಲೆ, ಬೂರುಗದ ಮರದಲ್ಲಿ ಆಶ್ರಯ ಪಡೆದದ್ದು ಮುದಿಕೋಕಿಲೆ, ಎಂದು ಧ್ವನಿಯಿಂದಲೇ ಇವರು ಗುರಿತಿಸುತ್ತಾರೆ. ಕೋಗಿಲೆಗಳ ಸ್ವಾಗತ ಗೀತೆಯಿಂದ ಎಚ್ಚೆತ್ತ ಕಾಗೆ-ಬಳಗ, ಗಲಾಟೆಮಾಡ ದಿರಿ ! ಎಂದು ಕರ್ಕಶ ಕಂಠದಿಂದ ಕೋಗಿಲೆಗಳನ್ನು ಎಚ್ಚರಿಸಿತು. ಆ ಅಶ್ವತ್ಥ ಮರದ ರೆಂಬೆ ನೋಡಿದೆಯಾ ? ಹದ್ದು, ಗೂಡುಕಟ್ಟಿ ಮರಿಮಾಡುವದರ ಲ್ಲಿದೆ, ಎಂದು ವಿಸ್ಮಯ ಪಡುತ್ತಿರುವಾಗ, ಬೀದಿ ದೀಪಗಳು ಕಣ್ಣು ಮುಚ್ಚಿ ಕೊಂಡಿದ್ದರಿಂದ ರಾಯರು, ಪ್ರಾಣಿ ವಿಜ್ಞಾನದ ಪಾಠಗಳಿಗೆ ಅಲ್ಲಿಯೇ ಮಂಗಳ ಹಾಡಬೇಕಾಯಿತು.

ಕತ್ತಲಲ್ಲಿ ಕಳ್ಳಕಾಕರ ಕಾಟಕ್ಕೆ ಕೊರತೆಯಿರುವುದಿಲ್ಲ. ಮುಗಿ ಯುತ್ತಬಂದ ಕಟ್ಟಡದ ಕಾವಲುಗಾರನು ಅರ್ಧಬೆಲೆಗೆ ಸಿಮೆಂಟ್ ಚೀಲ ವೊಂದನ್ನು ಮಾರಿದ. ಇನ್ನೊಬ್ಬನು ಅವನ ಕೈಗೆ ಕಾಫಿ-ತಿಂಡಿಗೆ ಕಾಸು ಹಾಕಿ, ಗೋಣಿಚೀಲ ತುಂಬ ರೇವೆಯನ್ನು ಲಪಟಾಯಿಸಿದ. ಅವನ ಸಹೋ ದ್ಯೋಗಿಯೇ ಉರುವಲಿಗಾಗಿ ಎರಡು ತೇಗಿನ ಕಂಬಗಳನ್ನು ಸಾಗು ಹಾಕಿದ. ಕೊಂಚ ಮುಂದೆ ಹೋದರೆ ಹೆಂಗಳೆಯರ ತಂಡವೊಂದು ತುಂಬ ಮುಸುಕು ಹಾಕಿ ಗೃಹ ನಿರ್ಮಾಣದ ಸ್ಥಳಕ್ಕೆ ಹೋಗಿ ಸಲಾಕಿಗಳನ್ನು ರಾಜಾರೋಷ ಎತ್ತಿಕೊಂಡು ಸದ್ದಿಲ್ಲದೇ ಕತ್ತಲಲ್ಲಿ ಕರಗಿತು. ಅವರನ್ನು ತಡೆಹಿಡಿಯ ಬೇಕಾದ ಕಾವಲುಗಾರ ಕುಂಭಕರ್ಣನ ನಿದ್ರಾಸುಖವನ್ನು ತನ್ನದನ್ನಾಗಿಸಿದ್ದ. ಅವರೆಲ್ಲ ನೇರ ಅವನ್ನು ಒಯ್ಯದೆ ಕತ್ತಲು ಗಾಢವಾಗಿದ್ದ ಓಣಿಯಲ್ಲಿ ಬಚ್ಚಿ ಟ್ಟದ್ದೇಕೆ ? ಎಂದು ವಿಚಾರಿಸಿದಾಗ, ರಾಯರು, ಈಗ ಆರು ಗಂಟೆಯ ತನಕ ಬೀಟ್ ಪೋಲಿಸರು ಗಸ್ತು ಹೊಡೆಯುತ್ತಿರುತ್ತಾರೆ. ಅವರು, ತಮ್ಮ ಮಾಮೂಲು ಕಸಿದುಕೊಳ್ಳದೇ ಇರುತ್ತಾರೆಯೇ ? ಇವರು ಹೊರಟು ಹೋದ ಆ ನಂತರ ಅವರು ಯಾರ ಭಯವೂ ಇಲ್ಲದೇ ಹಳೇ ಕಬ್ಬಿಣ ಕೊಳ್ಳು ವವನ ಅಂಗಡಿಗೆ ಸಾಗಿಸಿ ಹಾಕಬಹುದು ನೋಡು' ಎಂದು ಹೇಳಿದರು.

'ಪ್ರತಿದಿನ ನಾವಿಬ್ಬರೂ ಜೊತೆಯಾಗಿಯೇ ನಡೆದು ಹೋಗುತ್ತಿರುತ್ತೇವೆ. ಎಷ್ಟೋ ಘಟನೆಗಳನ್ನು ಒಟ್ಟಿಗೇ ನೋಡುತ್ತೇವೆ. ಆದರೆ ನಿಮಗೆ ತಕ್ಷಣ ಆಗುವ ಆಗು-ಹೋಗುಗಳ ಪರಿಚಯ ನನಗೇಕೆ ಆಗುವದಿಲ್ಲ ?' ಎಂದು ಪ್ರಶ್ನಿಸಿದಾಗ, ಪ್ರತಿ ವ್ಯಕ್ತಿಯೂ ಕಥೆ-ಕಾದಂಬರಿಗಳಲ್ಲಿ ಬರುವ ನಾಯಕ ನಾಯಕಿಯರಂತೆ ಅತ್ಯಂತ ವೈವಿಧ್ಯಪೂರ್ಣನಾಗಿರುತ್ತಾನೆ. ಇತರರ ನಡಾವಳಿಕೆ, ಹಾವ-ಭಾವಗಳನ್ನು ಮಾತುಕತೆಗಳನ್ನು ಲಕ್ಷಪೂರ್ವಕ ಅಭ್ಯಸಿಸಿದಾಗ ಅವರೆಲ್ಲರ ಚರಿತ್ರೆ-ಚಟುವಟಿಕೆಗಳೆಲ್ಲ ನಮ್ಮ ಮುಂದೆ ಬಿಚ್ಚಿ-ಕೊಳ್ಳುತ್ತ ಹೋಗುತ್ತವೆ' ಇವರೆಂದರು.

ಬೆಳಕು ಧರೆಗೆ ಇಳಿದು ಬರುತ್ತಿದ್ದಂತೆ ಕತ್ತಲು ಕಾಲಿಗೆ ಬುದ್ಧಿ ಹೇಳುತ್ತದೆ. ರಸ್ತೆಯ ಇಕ್ಕೆಲದಲ್ಲಿ ಬೆಳೆದು ನಿಂತ ಸಂಪಿಗೆ ಮರಗಳು ಸುಗಂಧ ಸೂಸುತ್ತ ನಿಂತಿದ್ದವು. ವಿಪುಲವಾಗಿ ಅದರ ಟೊಂಗೆಗಳು ಚಾಚಿವೆ. ತೋಣಪನೊಬ್ಬನು ಮರವೇರಿ ಚಿಗುರೆಲೆಕಿವಿಚಿ ನುಂಗುವ ಅದನ್ನು ನಾಚಿಸು ವಂತೆ ಸಂಪಿಗೆ ಹೂಗಳನ್ನು ಒರಟೊರಟಾಗಿ ಕಿತ್ತು ಕೈ ಚೀಲಕ್ಕೆ ತುಂಬುತ್ತಿದ್ದ. "ಅವನಿಗೆ ಅಂಥ ಅವಸರವೇಕೆ ? ಹೇಳು ನೋಡೋಣ ?" ರಾಯರ ಪ್ರಶ್ನೆ. "ಹೂವುಗಳೆಲ್ಲ ಬೀದಿಯ ಪೋಲಿಗಳ ಕೈವಶವಾಗುವದಕ್ಕೆ ಮರದ ಒಡೆಯನಿಗೆ ಕೆಲವಾದರೂ ದಕ್ಕಲಿ ಎಂಬ ಸಾಹಸ" ನಾನೆಂದೆ. "ಅವನು ಮನೆಯ ಮಾಲಕನೆಂದು ಹೇಗೆ ಊಹಿಸಿದೆ ?" ಮರುಪ್ರಶ್ನೆ. "ಮುಚ್ಚಿದ ಗೇಟು ಹಾಗೆಯೇ ಇದೆ. ನಾಯಿ ಬೊಗಳದೇ ಹೂವು ಕೀಳುವದನ್ನು ಸಂಭ್ರಮ ದಿಂದ ನೋಡುತ್ತಲಿದೆ." ವಿವರಣೆ ನೀಡಿದೆ. 'ಕಳ್ಳರು ಗೇಟು ಮುರಿಯುವ ಗೋಜಿಗೆ ಹೋಗದೇ ಕಾಂಪೌಂಡ್ ಗೋಡೆ ಹಾರುತ್ತಾರೆ....ಅಲ್ಲದೇ ಆ ನಾಯಿ ಕಳ್ಳನದು. ಮನೆಯ ಯಜಮಾನನನ್ನು ಬೆದರಿಸಲೆಂದು ಕರೆ ತಂದಿದ್ದಾನೆ !' ಎನ್ನುತ್ತಿದ್ದಂತೆ ಮನೆಯ ದೀಪ ಹೊತ್ತಿಕೊಂಡಿತು. ಹೂಗಳ್ಳನು ಕ್ಷಣದಲ್ಲಿ ಮರದಿಂದ ಇಳಿದು, ರಾಮು, ಬಾ ಎಂದು ತಕ್ಷಣ ಓಟಕಿತ್ತ. "ಎದುರಿಗೆ ಬರುತ್ತಿರುವವನನ್ನು ನೋಡಿದೆಯಾ ? ನಮ್ಮ ಕಟ್ಟಡ ದಲ್ಲಿಯೇ ವಾಸಿಸುತ್ತಾನೆ. ಉಚ್ಚ ಸೈನ್ಯಾಧಿಕಾರಿ. ದೇವರಲ್ಲಿ ಅಪಾರ ದೈವಭಕ್ತಿ. ಆದರೆ ಸ್ವತಃ ಹೂ ಬೆಳೆಸುವ ಇಲ್ಲವೆ ಕೊಂಡು ತಂದು ಪೂಜಿಸಿ

ದೇವರನ್ನು ಮೆಚ್ಚಿಸುವ ಬದಲಾಗಿ ಹೂಗಳ್ಳನಾಗಿದ್ದಾನೆ. ಬೇರೆಯವರು ಬೆಳೆಸಿದ ಗುಲಾಬಿ, ದಾಸವಾಳ, ಮಲ್ಲಿಗೆ, ಜಾಜಿ ಯಾವ ಹೂವನ್ನೂ ಬಿಡುವದಿಲ್ಲ." ರಾಯರು ವಿವರಿಸುತ್ತಿದ್ದಂತೆ, ಆತ ಜೇಬಿನಲ್ಲಿದ್ದ ಪಾಲಿಥಿನ್ ಕವರು ಹೊರಗೆಳೆದು ಕಿತ್ತು ಹೂ ತುರುಕಿದ. ಎದುರಿಗೆ ತಾಯಿ-ಮಗಳು ಮಹಾ ವಾಚಾಳಿಗಳು. ಮಾತು ನಿಲ್ಲಿಸದೇ ಆಕ್ಕ ಪಕ್ಕದ ಕಾಂಪೌಂಡು ಹತ್ತಿ ಹೂಗಳನ್ನು ಕ್ಷಣದಲ್ಲಿ ಕಿತ್ತು ಮಾತು ಮುಂದರಿಸುತ್ತ ಹೋಗುವದರಲ್ಲಿ ನಿಸ್ಸೀಮರು ! ಎಂದು ಪರೋಕ್ಷ ಪರಿಚಯ ನೀಡಿದರು. ಅವರು ಮಾತು ನಿಲ್ಲಿಸಿ ಏಕ ಚಿತ್ತದಿಂದ ಈ ವಿಚಿತ್ರ ದಂಪತಿಯನ್ನು ಕಣ್ಮರೆಯಾಗುವ ತನಕ ನೋಡಿದರು.

ರಾತ್ರಿಯೆಲ್ಲ ಮಲ ಮೂತ್ರಗಳನ್ನು ಅದುಮಿ ಹಿಡಿದಿದ್ದ ಸಾಕು ನಾಯಿಗಳು, ಹೊರ ಹೋಗಲು ಕೊಂಯ್‌ಗುಡಲಾರಂಭಿಸಿದಾಗ ಅವುಗಳ ಒಡೆಯ ಒಡತಿಯರು ಅರೆ ನಿದ್ರೆಯಲ್ಲಿಯೇ ಎದ್ದು ಕೀಲುಗೊಂಬೆಯಂತೆ ಕೈಯಲ್ಲೊಂದು ಕೋಲು ಹಿಡಿದು, ನಾಯಿಯ ಸರಪಳಿ ಹಿಡಿದು ಸಾರ್ವಜನಿಕ ಕಾಲ್ದಾರಿಗಳನ್ನೆಲ್ಲ ಶ್ವಾನ-ಕಕ್ಕಸುಗಳಾಗಿ ಮಾರ್ಪಡಿಸಿದರು. ಕಕ್ಕಸಕ್ಕೆ ನಾಯನ್ನು ಕರೆದೊಯ್ಯುವಾಗ ಕೈಯಲ್ಲಿ ಕೋಲು ಏಕೆ ? ಕಾಮತರ ಚಿಕಿತ್ಸಕ ಪ್ರಶ್ನೆ· "ಬೇಗನೇ ಪ್ರಾತರ್ವಿಧಿ ಪೂರೈಸಲಿಕ್ಕೆ ನಿರಾಕರಿಸಿದರೆ ಹೊಡೆಯಲು ಕೋಲು ಬೇಕೇ ಬೇಕು." ಖಂಡಿತ ಉತ್ತರ ಬಂದಿತು. 'ಸರಿ ರೈಲು ಬಿಟ್ಟಳು ! ಈ ಸಾಕುನಾಯಿಗಳು, ಬೋಗನ್ ವಿಲಾ ಬಳ್ಳಿಗಳಂತೆ. ಕೇವಲ ಅಲಂಕಾರಕ್ಕೆ ಇವೆ. ಆದರೆ ಅವಕ್ಕೆ ಕಾದಾಡುವ, ಸ್ವಸಂರಕ್ಷಣೆಯ ಸಾಮರ್ಥ್ಯ ಇಷ್ಟೂ ಇರುವುದಿಲ್ಲ, ಅಂತೆಯೇ ಕಂತ್ರಿ-ನಾಯಿಗಳು ಅವುಗಳ ಮೇಲೆ ಎರಗಬಾರದು ಎಂದು ಮಾಲಕರು ಹೂಡಿದ ಉಪಾಯ ಇದು' ಎಂದು ವಿವರ ನೀಡಿದರು. ಅಷ್ಟರಲ್ಲಿ ಸಾವುಕಾರರ ಆಳೊಬ್ಬ, ನೋಡಿದರೇ ನಡುಕ ಹುಟ್ಟಿಸುವ ದೈತ್ಯಾಕಾರದ ಜೋಡಿ ಆಲಸೇಶನ್ ನಾಯಿಗಳೊಂದಿಗೆ ಎದುರಿಗೇ ಬಂದ. "ಇವನ್ನು ಸಾಕುವದು ವಿಪರೀತ ಖರ್ಚಿನದಾಗಿದ್ದಂತೆ ಅಪಾಯಕಾರಿಯೂ ಆಗಿರಬಹುದಲ್ಲವೇ ? ಎಂದು ಅವುಗಳ ಬಗ್ಗೆ ಕುತೂಹಲ ವ್ಯಕ್ತಪಡಿಸಿದಾಗ, "ಪ್ರತಿಷ್ಠೆಗಾಗಿ

ಇವನ್ನ ಸಾಕುವದು ವಾಡಿಕೆ. ಕಾಲಕಾಲಕ್ಕೆ ಒದಗಿಸುವ ಮಾಂಸ, ಹಾಲುಗಳ ಪೌಷ್ಟಿಕ ಆಹಾರ ಸವಿದು, ಮಾತ್ರೆಗಳನ್ನು ನುಂಗಿ, ಚುಚ್ಚು ಮದ್ದು ಚುಚ್ಚಿಸಿಕೊಂಡು ಯಜಮಾನರ ಹಾಸಿಗೆಯಲ್ಲಿ ಪವಡಿಸುವ ಈ ನಾಯಿಗಳಿಗೆ ತಮ್ಮ ಕರ್ತವ್ಯ ಏನೆಂಬುದೇ ಮರೆತಿರುತ್ತದೆ. ಅಗರ್ಭ ಶ್ರೀಮಂತರಿಗೆ ಕಪ್ಪುಹಣ ಚಲಾವಣೆಯಲ್ಲಿ ತರಲು ಇಂಥ ನಾಯಿಗಳನ್ನು ಸಾಕುವದೂ ಒಂದು ಹಾಬಿಯಾಗಿರುತ್ತಿರಬೇಕು ! ಎಂದು ನಕ್ಕರು. ಮಾತಿನಲ್ಲಿ ಮೈಮರೆತಾಗ ಯಾರೋ ಸೀರೆಯನ್ನು ಹಿಂದಿನಿಂದ ಜಗ್ಗಿದಂತಾ ಯಿತು. ತಿರುಗಿ ನೋಡಿದರೆ ಮುದ್ದಾದ ಪೊಮೆರಾನಿಯನ್ ನಾಯಿ ಹಿಂಬಾಲಿಸಿ ಬರುತ್ತಿದೆ, ಒಡೆಯನು ಅದೆಷ್ಟು ಜಬರಿಸಿ ಕರೆದರೂ ಅವನತ್ತ ಹೋಗದೇ ನನ್ನೊಂದಿಗೆ ಬರುತ್ತಿದೆ ! ನಾನು ನಿಂತು ಆದನ್ನೆತ್ತಿ ನೇವರಿಸಿ ಮಾತನಾಡಿಸಿದಾಗ ಬಾಲ ಅಲ್ಲಾಡಿಸಿ ಸ್ನೇಹದಿಂದ ಕೈಯನ್ನು ನೆಕ್ಕಿತು. ನಂತರ ತಾನಾಗಿ ಮಾಲಕನತ್ತ ಹೋಯಿತು. 'ಹಿಂದಿನ ಜನ್ಮದಲ್ಲಿ ನಿನ್ನ ಸ್ನೇಹಿತೆಯಾಗಿದ್ದರಬೇಕು. ಈ ಜನ್ಮದಲ್ಲಿ ಕೇವಲ ಬೆವರು ವಾಸನೆಯಿಂದಲೋ, ನಿನ್ನ ಧ್ವನಿ ಪರಿಚಯದಿಂದಲೋ ನಿನ್ನನ್ನು ಥಟ್ಟನೆ ಗುರುತಿಸಿದೆ' ನೋಡು" ಎಂದು ರಾಯರು ಎಳೆಯರಂತೆ ಚುಡಾಯಿಸಿದರು.

ದಿನಂಪ್ರತಿ ವಾಯುವಿಹಾರಕ್ಕಾಗಿ ಬರುವವರು ಒಬ್ಬೊಬ್ಬರಾಗಿ ಕಾಣಿಸಿ ಕೊಂಡರು. ಡಾಕ್ಟರರ ಸಲಹೆಯ ಮೇರೆಗೆ ಕಡ್ಡಾಯವಾಗಿ ವಾಕ್ ಕೈ ಕೊಂಡವಳು, ಏದುಸಿರು ಬಿಡುತ್ತ ನಿಂತು ನಿಂತು ಮುಂದುವರಿಯುತ್ತಿದ್ದಳು. ಸಂಧಿವಾತದಿಂದ ಬಳಲುತ್ತಿದ್ದವಳು ಕೈ ಕೊರಳುಗಳಿಗೆ ಬೆಲೆಯುಳ್ಳ ಆಭರಣ ಗಳನ್ನು ತೊಟ್ಟು ಕಳ್ಳ ಕಾಕರಿಗೆ ಸವಾಲು ಎಸೆಯುತ್ತ ಹೊರಟಿದ್ದಳು. ಎರಡನೇ ಹೆಂಡತಿಯನ್ನು ಮಾಡಿಕೊಂಡವ, ತಾನಿನ್ನೂ ತರುಣನೆಂಬ ಭ್ರಮೆ ಯಲ್ಲಿ ಬನಿಯನ್, ನಿಕ್ಕರ್, ಕ್ಯಾನವಾಸ್ ಶೂ ಧರಿಸಿದರೂ, ನೆರೆತ ಕೂದಲು, ಜೋಲು ಬಿದ್ದ ಸ್ನಾಯುಗಳು, ಡೊಳ್ಳು ಹೊಟ್ಟೆಗಳು ದಾರಿ ಹೋಕರಿಗೆ ಅವರ ನಿಜ ವಯಸ್ಸಿನ ಪರಿಚಯ ಮಾಡಿಕೊಡುತ್ತಿದ್ದವು. ನಿವೃತ್ತ ಶಾರೀರಿಕ ಶಿಕ್ಷಣದ ಶಿಕ್ಷಕನೆಂದು ತೋರುತ್ತದೆ– ಅಭ್ಯಾಸ ಬಲದಿಂದ

ಕೈಯಲ್ಲಿದ್ದ ಕೋಲನ್ನೆ ಲಾಠಿಯಂತೆ ಹವೆಯಲ್ಲಿ ತಿರುವುತ್ತ ನಡೆದಿದ್ದ. ಶಾರೀರಿಕ ಶ್ರಮದಲ್ಲಿ ವಿಶ್ವಾಸವಿಟ್ಟ ಪಿತನು, ಈರ್ವರು ಕುಮಾರಿಯರನ್ನು ಕಡ್ಡಾಯವಾಗಿ ತಿರುಗಾಟಕ್ಕೆ ಕರೆತಂದದ್ದರಿಂದ, ಅವರು ತಮ್ಮ ಅಲಂಕಾರ ರಹಿತ ಮುಖಗಳನ್ನು ನೋಡಿದವರು ಏನೆಂದಾರು ! ಎಂಬ ಭಾವನೆಯಿಂದಲೇ ತಲೆತಗ್ಗಿಸಿಕೊಂಡು ಮಾತಿಲ್ಲದೇ ನಡೆಯುತ್ತಿದ್ದರು. ಮೂವರು ಹೆಂಗಳೆಯರ ತಂಡ ಒಂದಕ್ಕೆ ವಾಯು ಸೇವನೆಗಿಂತ ಅತ್ತೆ, ಮಾವ, ನಾದಿನಿ, ಭಾವ, ಮೈದುನರ ವರ್ತನೆಗಳನ್ನು ಖಂಡಿಸುವದೇ ಮುಖ್ಯವಾದ್ದರಿಂದ ಇರವೆಯ ವೇಗದಲ್ಲಿ ಹೊರಟಿದ್ದರು. ರಾಯರು ಇದುರಿಗೆ ಬರುವ ಪ್ರತಿ ವ್ಯಕ್ತಿಯ ಕುರಿತು ತಮ್ಮ ಅಭಿಪ್ರಾಯ ಹೇಳದೇ ಇರುತ್ತಿರಲಿಲ್ಲ. ಅವರೂ ನಮ್ಮ ಬಗ್ಗೆ ಹೀಗೇ ಏನಾದರೂ ಅನ್ನುತ್ತಿರಬೇಕು, ಎಂದು ನಾನೊಮ್ಮೆ ಹೇಳಿದಾಗ ಹಿಂದಿನಿಂದ ನಿನ್ನನ್ನು ನೋಡಿ ಈ ಚಿಕ್ಕ ಮಹಿಳೆ, ಬೊಕ್ಕತಲೆಯವನನ್ನು ಏನೆಂದು ಮೆಚ್ಚಿಕೊಂಡಳೋ ! ಎನ್ನುತ್ತಾರೆ. ಇಲ್ಲವೇ ಜೊತೆಗೆ ಹೋಗುತ್ತಿರುವವನು ಪಿತನೋ, ಪತಿಯೋ, ಬಂಧುವೊ ಎಂದು ಚರ್ಚಿಸುತ್ತಿರಬೇಕು, ಎಂದು ಗೇಲಿ ಮಾಡಿದರು.

ಕಾಫಿ, ತಿಂಡಿ, ಊಟಗಳಂತೆಯೇ ಪ್ರತಿನಿತ್ಯವೂ ತಪ್ಪದೇ ಕೈಕೊಳ್ಳುವ ತಿರುಗಾಟದ ಬಗ್ಗೆ ಹಲವರಿಗೆ ಕುತೂಹಲ. ಸಹೋದ್ಯೋಗಿಯೊಬ್ಬಳು, ತನಗೂ ಮುಂಜಾನೆಯ ತಿರುಗಾಟ ಇಷ್ಟ, ಆದರೆ ಪತಿಯನ್ನು ಹೊರಡಿಸುವದೇ ಕಷ್ಟ ! ಎಂದು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿದಳು. "ಎಷ್ಟೇ ಬೇಗನೆ ಎದ್ದರೂ, ಪತಿ ಮಕ್ಕಳಿಗೆ ಬಿಮ್ಮನೇ ನಾಶ್ತಾ, ಡಬ್ಬಿ ತಯಾರಿಸುವದರಲ್ಲಿ ಬಿಡುವೇ ಸಿಕ್ಕುತ್ತಿಲ್ಲ. ಏನು ಮಾಡಲಿ ಎಂದು ತಿಳಿಯುತ್ತಿಲ್ಲ" ಎಂದಳು ಕುಟುಂಬ ವತ್ಸಲೆಯೋರ್ವಳು. "ನಾವೇ ಸಾವಾಗಿದ್ದರೆ ಹೇಗಾದರೂ ಸಮರ್ಥಿಸಿಯಿಸಿ ಇವರನ್ನು ತಿರುಗಾಟಕ್ಕೆ ಎಳೆದುಕೊಂಡೇ ಹೋಗಬಹುದಿತ್ತು ಎಂದು ಗೊಣಗಿದಳು, ವಿನೋದನಾ ಪ್ರವೃತ್ತಿಯ ಮಹಿಳಾಮಣಿ. 'ಯಜಮಾನರು ದಿನಂಪ್ರತಿ ಜನತಾ ಹೊಟೇಲಿನಲ್ಲಿ ಮಸಾಲೆದೋಸೆ ಕೊಡಿಸುತ್ತಿರಬೇಕು. ಅಂತೆಯೇ ಮಾತಿಲ್ಲದೇ ಗಂಡನೊಡನೆ ವಾಕಿಂಗ್ ಹೊರಟುಬಿಡುತ್ತಾಳೆ ! ಎಂದಳು ನನ್ನ ನಾಲಿಗೆ

ಚಾಪಲ್ಯದ ಅರಿವಿದ್ದ ಚಿರಪರಿಚಿತೆ. ಈ ಮಾತನ್ನು ಬಾಯ್ತಪ್ಪಿ ಒಮ್ಮೆ ಯಜಮಾನರೆದುರು ಹೇಳಿಬಿಟ್ಟೆ. ಆಮೇಲೆ ಮರಗುವಂತೆ ಆಯಿತು. ಏಕೆ ಗೊತ್ತೆ ? ಎಂದಾದರೊಮ್ಮೆ ಮಸಾಲೆದೋಸೆ ಬೇಡಿಕೆ ಬರುವುದು ಖಚಿತ ವೆಂದು ಮುಂದಾಲೋಚನೆಯಿಂದ ರಾಯರು ತಿರುಗಾಟದ ರಸ್ತೆಯನ್ನು ಬದಲು ಮಾಡಿದ್ದೇ ಅಲ್ಲದೇ ನಂತರದ ದಿನಗಳಲ್ಲಿ ತಿರುಗಾಟವನ್ನು ಅರ್ಧಗಂಟೆ ಮೊದಲೇ ಪ್ರಾರಂಭಿಸಿ ಜನತಾ ಹೊಟೇಲ್ ತೆರೆಯುವ ಹತ್ತು ನಿಮಿಷ ಮೊದಲೇ ತಿರುಗಿ ಮನೆ ಸೇರುವಂತೆ ನೋಡಿಕೊಳ್ಳುತ್ತಾರೆ !

ಆದರೆ ರಾಯರೊಡನೆ ಪ್ರತಿದಿನ ತಿರುಗಾಟಕ್ಕೆ ಹೊರಟಾಗ ಹೊಸ ಹೊಸ ವಿಚಾರ, ಘಟನೆ, ವ್ಯಕ್ತಿಗಳ ಪರಾಮರ್ಶೆಯ ಹೊಸ ಅನುಭವ ನನ್ನ ದಾಗುತ್ತದೆ, ಎಂಬುದನ್ನು ರಾಯರಾದಿಯಾಗಿ ಯಾರೂ ಅರಿಯುವ ಗೋಜಿಗೆ ಹೋಗಿಯಾರೇ ?



# ಲಕ್ಷ್ಮಿ ಹೋಗಲೊಲ್ಲಳು !



ಸರಸ್ವತಿಯ ಆರಾಧಕರಲ್ಲಿ ತಾನಾಗಿ ಆಗಮಿಸಿ ಸಹಜೀವನ ನಡೆಸಲು ಲಕ್ಷ್ಮಿ ದೇವಿಗೆ ಯಾವಾಗಲೂ ಮುಜುಗರ! ಅಂತೆಯೇ ವಿಶ್ವದ ಹೆಚ್ಚಿನ ಧೀಮಂತರು, ಬುದ್ಧಿಜೀವಿಗಳು, ಪ್ರತಿಭಾವಂತರು, ಕಲಾಕಾರರು, ವಿಜ್ಞಾನಿಗಳು, ಸಾಹಿತಿಗಳು ಧನಿಕರಾಗುವದರಲ್ಲಿ ಹಿಂದೆ ಬಿದ್ದವರಿದ್ದಾರೆ. ಅಮೇರಿಕೆಯ ಫೋರ್ಡ್, ರಾಕಫೆಲರ್, ಭಾರತದ ಬಿರ್ಲಾ, ಟಾಟಾ, ಡಾಲ್ಮಿಯ, ಹಿಂದುಜ ವಂಶಗಳಲ್ಲಿ ಹುಟ್ಟಿದವರು. ವೈಯಕ್ತಿಕ ಯೋಗ್ಯತೆ ಹೇಗೇ ಇದ್ದರೂ ಆಗರ್ಭ ಶ್ರೀಮಂತರಾಗಿ ಮೆರೆದಾಡುವಂತೆ ಆಯಿತು. ನಮ್ಮ ರಾಯರು ಲಕ್ಷ್ಮಿ

ಆರಾಧಕ ವ್ಯಾಪಾರಿಗಳ ಕುಟುಂಬದಲ್ಲಿ ಜನಿಸಿದರೂ, ಚಿಕ್ಕಂದಿನಿಂದಲೇ ಸರಸ್ವತಿಯನ್ನು ಆರಾಧ್ಯ ದೇವತೆಯಾಗಿ ಸ್ವೀಕರಿಸಿದರು ಆದರೂ ಲಕ್ಷ್ಮೀದೇವಿ ದೂರದಿಂದಲಾದರೂ ಅವರನ್ನು ಆಶೀರ್ವದಿಸಿಯೇ ಇದ್ದಾಳೆ! ಶಾಲಾ ದಿನಗಳಲ್ಲಿ 'ಕನಕಾಂಗಿನಿ' ಪಾಠದಲ್ಲಿ ಮುಟ್ಟಿದ್ದೆಲ್ಲ ಚಿನ್ನವಾಗುವ ವರದ ಕುರಿತು ಓದಿದಾಗ ಮೊದಲ ಅರ್ಧಭಾಗ ಬಾಯಿ ನೀರೂರಿಸುವಂತೆ ಇರುತ್ತಿತ್ತು. ಅಂಥ ವರ, ಯಾರಿಂದಲೂ, ಯಾರಿಗೂ ಲಭಿಸುವುದಿಲ್ಲ ವೆಂದು ತಿಳಿದ ನಂತರದ ದಿನಗಳಲ್ಲಿ ಕನಸುಗಳನ್ನು ನನಸಾಗಿ ಮಾಡುವ ವರನನ್ನು ವರಿಸುವ ಭಾಗ್ಯ ನನ್ನದಾಯಿತು.

ಹಣ ಉಳಿಸಲು, ಪರರನ್ನು ಖರ್ಚಿಗೆ ಒಳಪಡಿಸುವವರಲ್ಲಿ ಏನೇನೂ ಕೊರತೆಯಿಲ್ಲ. ಆದರೆ ಅತ್ಯಂತ ಸ್ವಾಭಿಮಾನಿಯಾದ ರಾಯರು, ತೀರ ಚಿಕ್ಕ ವಯಸ್ಸಿನಿಂದಲೇ ಕಠೋರ ಶಿಸ್ತಿನ ಮಿತವ್ಯಯವನ್ನು ರೂಢಿಸಿಕೊಂಡ ವರು. ನಮ್ಮ ದೀರ್ಘವಾದ ದಾಂಪತ್ಯ ಜೀವನದಲ್ಲಿ ಎಂದೂ ಯಾರ ಹಂಗಿಗೂ ಒಳಗಾಗುವ ಸಂದರ್ಭ ಬರಲಿಲ್ಲ. ಇಷ್ಟಾಗಿ ದೈನಂದಿನ ಅವಶ್ಯಕತೆಗಳನ್ನು ಪೂರೈಸಲು ಯಾವ ಕೊರತೆಯೂ ಬಾರದಂತೆ ನೋಡಿಕೊಂಡರು. ವಿಪುಲ ವಾದ ತರಕಾರಿ, ಹಣ್ಣುಹಂಪಲುಗಳು ದಿನವೂ ಮನೆಗೆ ಬರಲೇಬೇಕು. ರಾಜಸ್ಥಾನಿಗಳ ಸ್ನಾನಕ್ಕೆ ಸಾಲುವಷ್ಟು ಹಾಲು ಖರೀದಿಸಿ, ಮೊಸರು, ಮಜ್ಜಿಗೆ ಸೇವಿಸಲೇಬೇಕು. ಹಲವಾರು ಕ್ಯಾಮರಾಗಳು, ಅವಕ್ಕೆ ಬೇಕಾಗುವಷ್ಟು ಫಿಲ್ಮ ಖರೀದಿಸುವದರಲ್ಲಿ ಹಿಂದೆ ಬಿದ್ದವರಲ್ಲ. ಊರೂರು ಅಲೆಯಲು, ಪಶುಪಕ್ಷಿಗಳ ಛಾಯಾಗ್ರಹಣ ಮಾಡಲು, ಸಾರಿಗೆಗೆ, ವಸತಿ, ಊಟ-ತಿಂಡಿಗಳಿಗೆ ತಮ್ಮ ಜೇಬಿನಿಂದಲೇ ಖರ್ಚು ಮಾಡುವದರಲ್ಲಿ ವಿಶ್ವಾಸ ವಿಟ್ಟವರು ತಮ್ಮ ವೃತ್ತಿಯಾದ ವೈಜ್ಞಾನಿಕ ಛಾಯಾಗ್ರಹಣದಲ್ಲಿ ಶಿಕ್ಷಕ ಸಂಶೋಧಕರಿಗೆಲ್ಲ ಅಲ್ಪ ಶುಲ್ಕದಲ್ಲಿಯೇ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಲೇಖನ, ಪುಸ್ತಕಗಳಿಗೆ ಎಂದೂ ಗೌರವಧನ ಕೇಳಿದವರಲ್ಲ. ಒಮ್ಮೆ ಮಗ ವಿಕಾಸನು, ಈ ಮನೆಯಲ್ಲಿ ಹೆಚ್ಚಿನ ಹಣ ಖರ್ಚು ಮಾಡುವವರೆಂದರೆ ತಂದೆಯವರೇ ಎಂದು ಹೇಳಿ ನನ್ನನ್ನು ದಂಗುಗೊಳಿಸಿದ್ದ. ನಂತರ ನಗುತ್ತಾ "ನಮಗೆ ಅವಶ್ಯವಿದ್ದ ಸಕಲ ಸಾಮಗ್ರಿಗಳನ್ನು ತರಲು ಅವರನ್ನೆ ಆಗ್ರಹಿಸು

ವದರಿಂದ ಅವರಿಗೆ ಹಣ ಖರ್ಚು ಮಾಡದೇ ಬೇರೆ ಮಾರ್ಗವಿಲ್ಲ !" ಎಂದು ವಿವರಣೆ ಕೊಟ್ಟಿದ್ದ. ಅತನ ಮಾತಿನಲ್ಲಿ ಕೊಂಚ ಸತ್ಯಾಂಶವಿತ್ತು. ಆಫೀಸಿನಿಂದ ಕೊಡಲ್ಪಡುತ್ತಿದ್ದ ಒಂದು ವೃತ್ತ ಪತ್ರಿಕೆಯ ಹಣದ ಸಂದಾಯವನ್ನು ರಾಯರೇ ಮಾಡುತ್ತಿದ್ದರು. ಬಿಲ್‌ಕೊಟ್ಟು ಬಂದ ಹಣ ನನ್ನ ಪರ್ಸ್ ಸೇರುತ್ತಿತ್ತು. ಒಟ್ಟಾದ ರದ್ದಿ ಮಾರಿ, ನಮ್ಮ ಸುಪುತ್ರ ಆ ಬಿಡಿಗಾಸನ್ನು ತನ್ನ ಜೇಬಿಗೆ ಇಳಿಸುತ್ತಿದ್ದ. ಇದೊಂದು ಕಾಕತಾಳೀಯವಷ್ಟೆ!

ರಾಯರ ಸ್ವಭಾವ ಹೇಗಿದ್ದರೂ ಅವರು ಹಣಕ್ಕಾಗಿ ಪರದಾಡಿದ್ದನ್ನು ಒಮ್ಮೆಯೂ ನೋಡಲಿಲ್ಲ. ನನ್ನ ನಾದಿನಿಯೊಬ್ಬಳು ಸದಾಕಾಲ ತನ್ನ ಅಣ್ಣ ಬ್ಯಾಂಕಿಗೆ ಹೋಗಿ ಹಣತಂದು ಸಂಸಾರ ಸಾಗಿಸುವದನ್ನು ನೋಡಿ ಒಮ್ಮೆ ಧೈರ್ಯಮಾಡಿ "ಯಾವಾಗಲೂ ನೂರರ ನೋಟು ತರುತ್ತಲೇ ಇರು–ತ್ತಿಯಲ್ಲ! ಒಮ್ಮೆಯೂ ಜಮಾ ಮಾಡಿದ್ದನ್ನು ನೋಡಲೇ ಇಲ್ಲ!" ಎಂದು ಕೇಳಿಯೇ ಬಿಟ್ಟಳು. "ಅಲ್ಲಮ್ಮ, ನನ್ನ ಮಾಪ ಇದ್ದದ್ದು ಅಂಚೆ ಖಾತೆಯಲ್ಲಿ. ಬ್ಯಾಂಕಿನಲ್ಲಿ ಅಲ್ಲ. ಹಣ ಇಲ್ಲದೇ ಬೇಕಾದಾಗ ಕೊಡುವ ಬ್ಯಾಂಕ್ ಯಾವುದಾದರೂ ಇದ್ದರೆ ಹೇಳಮ್ಮ!" ಎಂದಾಗ ಆವಳಿಗೆ ಮುಜುಗರವಾಯ್ತು. ರಾಯರ ಖಾತೆಯಲ್ಲಿ ಸತತವಾಗಿ ತೆಗೆಯುತ್ತಿದ್ದರೂ ಹಣ ಹೇಗೆ ಸಂಗ್ರಹವಾಗುತ್ತದೆ ? ಎಂದು ನಾದಿನಿಯೊಂದಿಗೆ ನಾನು ಸೇರಿ ಸಂಶೋಧನೆ ನಡೆಸಿದೆ. ಮೊದಲ ಬಾರಿಗೆ ನೌಕರಿ ಸೇರಿದಾಗಿನಿಂದಲೂ ಸಂಬಳದ ನಿರ್ದಿಷ್ಟ ಭಾಗವನ್ನು ಠೇವಣಿಯಾಗಿ ಇಡುತ್ತಲೇ ಬಂದಿದ್ದಾರೆ. ನಿಗದಿತ ಕಾಲಕ್ಕೆ ಬಡ್ಡಿ ಬರುತ್ತಲೇ ಇರುತ್ತದೆ. ಬೇಕಾದಾಗ ಬಡ್ಡಿಯ ಹಣವಷ್ಟೆ ಪಡೆಯುವ ಯೋಜನೆ ಹಾಕಿಕೊಂಡರೆ ಯಾವ ತೊಂದರೆಯೂ ಇಲ್ಲ. ಮೂಲನಿಧಿಯಿಂದ ಕೆಲವು ಗೃಹೋಪಯೋಗಿ ಸಾಮಾನುಗಳನ್ನು ಕೊಳ್ಳಲು ರಾಯರ ಮನಸ್ಸನ್ನು ಒಲಿಸಲು ಮೊದಮೊದಲು ಯತ್ನಿಸಿದ್ದುಂಟು. ಆದರೆ ಅವರದು ಕಪಿಮುಷ್ಟಿ. ಅದು ದೇವನಿಧಿ. ಖರ್ಚು ಮಾಡುವಂತಿಲ್ಲ!" ಎಂದು ಕಡ್ಡಿಮುರಿದಂತೆ ಹೇಳಿಬಿಡುವರು. ಈ ಒಟ್ಟಾಗುತ್ತ ಹೋದ ನಿಧಿಯ ಮೊತ್ತ ಎಷ್ಟೆಂದು ಪತ್ನಿಗೇ ತಿಳಿಯದಿದ್ದಾಗ ಇತರರಿಗೆ ತಿಳಿಯುವದು ದೂರವೇ ಉಳಿಯಿತು.

ಲಕ್ಷ್ಮಿಯನ್ನು ಬರಮಾಡಿಕೊಳ್ಳಲು ಎಂದೂ ಲಾಟರಿ ಟಿಕೇಟು ಕೊಂಡವರೇ ಅಲ್ಲ. ರೇಸ್, ಚಿಟ್‌ಫಂಡ್‌ಗಳಲ್ಲಿ ವಿಶ್ವಾಸವಿಲ್ಲ. "ಬ್ಲೇಡ್" ಕಂಪನಿಯವರು ಈಗ ಹಣಕಟ್ಟಿದರೆ ಮೂರು ತಿಂಗಳ ನಂತರ ದಿನಬಳಕೆಯ ಸಾಮಾನುಗಳನ್ನು ಅರ್ಧ ಬೆಲೆಗೆ ಕೊಡುವ ವಾಗ್ದಾನಕ್ಕೆ ಮರುಳಾಗಿ ಟೋಪಿ ಬಿದ್ದವರಲ್ಲ. ಈಗ ಖರೀದಿಮಾಡಿ. ಮುಂದೆ ಹಣ ಪಾವತಿ ಮಾಡಿ! ಯೋಜನೆಯಲ್ಲಿ ಪಾಲುಗೊಂಡು, ಮಾರವಾಡಿಗಳಿಗೆ ಚಕ್ರಬಡ್ಡಿ ಹಣ ತೆತ್ತ ವರಲ್ಲ. "ಈಶ್ವರ ಪ್ರತಿಮೆ ಕೊಂಡರೆ ಪಾರ್ವತಿ ಮೂರ್ತಿ ಪುಕ್ಕಟೆ!" ಜಾಹಿರಾತಿನಲ್ಲಿ ವಿಶ್ವಾಸವಿಟ್ಟವರಲ್ಲ. "ಮಿಲ್ಲಿನ ಬೆಲೆ, ನೇಕಾರರ ದರ, ಖರೀದಿಯ ಮೊತ್ತದಲ್ಲಿ ಮಾರಾಟ ಮಾಡುತ್ತೇವೆ" ಎನ್ನುವವರೆಲ್ಲ ಢೋಂಗಿಗಳು ! ಎಂದು ವಾದಿಸುವವರು.ದಸರಾ, ದೀಪಾವಳಿ, ಕ್ರಿಸ್‌ಮಸ್‌ಗಳ ವಿಶೇಷ ಬಹುಮಾನಗಳಿಗಾಗಿ ಆಸೆಪಟ್ಟವರಲ್ಲ. ಸಾಬೂನು, ಸೇವಿಗೆ ಕಂಪನಿ ಯವರ ಮಾರಾಟದಲ್ಲಿ ಹೆಚ್ಚಳವಾಗಲು ಸಹಾಯಕಾರಿ ಜಯಜಯಕಾರದ ವಾಕ್ಯಗಳನ್ನು ಬರೆದು ಕಳಿಸುವ ಗೋಜಿಗೆ ಹೋದವರಲ್ಲ. ಮಾರಾಟ ಗಾತಿಯರು ಹೊಸದಾಗಿ ಹೊರಬಂದ ಬಳಕೆದಾರರ ಸಾಮಗ್ರಿಗಳನ್ನು ಜನಪ್ರಿಯಗೊಳಿಸುವುದಕ್ಕಾಗಿ ಅರ್ಧಬೆಲೆಯಲ್ಲಿ ಕೊಡುತ್ತೇವೆ, ಕೂಪನ್ ಸಿಗತ್ತೆ ! ಎಂದೆಲ್ಲ ಮನ ಒಲಿಸಲು ಯತ್ನಿಸಿ ಸೋತು ಸುಣ್ಣವಾಗಿ ಮರಳಿ ದ್ದಾರೆ. ಖಾಲಿ ಟೂತ್‌ಪೇಸ್ಟ್ ಟ್ಯೂಬ್‌ಗಳನ್ನು ಕೊಟ್ಟು ಹೊಸವನ್ನು ಕೊಂಡರೆ ನೂರು ರೂಪಾಯಿ ಸೂಟು, ಹಳೆಯ ಪ್ರೆಶರ್‌ಕುಕ್ಕರ್, ಗ್ಯಾಸ್ ಬರ್ನರ್, ಮಿಕ್ಸರ್, ಟೈಪರೈಟರ್‌ಗಳನ್ನು ಕೊಟ್ಟರೆ ಹೊಚ್ಚ ಹೊಸವನ್ನು ಇಳಿ ಬೆಲೆಗೆ ಪೂರೈಸುತ್ತೇವೆ, ಎಂಬ ಘೋಷಣೆಗಳೆಲ್ಲ ಗಿರಾಕಿಗಳಿಗೆ ಮೋಸ ಮಾಡುವ ವಿಧಾನಗಳೆಂದು ಇವರ ವಾದ. ರೇಡಿಯೋ, ಟಿ.ವಿ., ವಿಸಿಆರ್. ಮಿಕ್ಸಿ, ಕೈಗಡಿಯಾರಗಳ ರಿಪೇರಿ ಪುಕ್ಕಟೆಮಾಡಿ ಕೊಡುವದೂ ವಂಚಕ ವೃತ್ತಿಯೆಂದು ನಂಬಿದ್ದಾರೆ. ಹಾಳಾದ ಬಿಡಿಭಾಗಗಳನ್ನು ಸೇರಿಸಿರುವದು, ಭಾರೀ ಮೊತ್ತ ತೆರದೇ ಒಂದೂ ದುರಸ್ತಿ ಆಗದಿರುವದು, ಇವರ ಅಂಬೋಣ ವನ್ನು ಪುಷ್ಟೀಕರಿಸುತ್ತದೆ.

ಕ್ರಮೇಣ ಲಕ್ಷ್ಮಿದೇವಿಯ ಪ್ರೀತಿಗೆ ರಾಯರು ಪಾತ್ರರಾದರು ! ಅದು

ಎಂದಿನಿಂದ ಎಂದು ಹೇಳುವದು ಕಷ್ಟ. ಅಮೇರಿಕೆಯಂಥ ದುಬಾರಿ ದೇಶದಲ್ಲಿ ಸಿಗುವ ಅತ್ಯಲ್ಪ ಶಿಷ್ಯವೇತನದಲ್ಲಿಯೇ ಸಕಲ ಖರ್ಚನ್ನು ತೂಗಿಸಿಕೊಂಡು ಹೆಚ್ಚಿನ ವಿದ್ಯಾರ್ಜನೆಗೆ ಪಾಶ್ಚಾತ್ಯ ದೇಶಕ್ಕೆ ಹೋಗಲು ಬಯಸಿದ ಮೂವರಿಗೆ ಆರ್ಥಿಕ ನೆರವು ನೀಡಿದ್ದರು. ಸಾಲದ್ದಕ್ಕೆ ಅದೇ ಅವಧಿಯಲ್ಲಿ ಅಮೇರಿಕೆಯ ಮೂವತ್ಮೂರು ರಾಜ್ಯಗಳು ಮತ್ತು ಯುರೋಪದ ಹೆಚ್ಚಿನ ದೇಶಗಳಿಗೆ ಭೇಟಿ ಕೊಟ್ಟಿದ್ದರು. ಜೊತೆಗೆ ತಮ್ಮ ಹವ್ಯಾಸಗಳನ್ನು ಮುಂದುವರಿಸಿಕೊಂಡು ಹೋಗಲು ಪುಸ್ತಕಗಳು, ಕ್ಯಾಮರಾ ಮತ್ತು ಛಾಯಾಗ್ರಹಣಕ್ಕೆ ಬೇಕಾಗುವ ಸಲಕರಣೆಗಳನ್ನು ತಂದಿದ್ದರು. ಇದನ್ನೆಲ್ಲ ನೋಡಿದರೆ, ಹಣಗಳಿಸುವದರಲ್ಲಿ ಅಲ್ಲದಿದ್ದರೂ ಬಳಸುವದರಲ್ಲಿ ಯಾವುದೋ ಚಮತ್ಕಾರವನ್ನು ಅವರು ತಮ್ಮ ದನ್ನಾಗಿ ಮಾಡಿಕೊಂಡಿದ್ದಾರೆಂದು ಅನಿಸದೇ ಇರದು.

ನಮಗೊಂದು ವಾಸಸ್ಥಾನ ಬೇಕು, ಎಂದು ಅನಿಸಿದಾಗ ಇವರ ಕಾರ್ಯ ವೈಖರಿಗೆ ಗರಿ ಬಿಚ್ಚಿಕೊಂಡವು. ನನ್ನ ತಂದೆಯವರು ಅಂಚೆ ಖಾತೆ ಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಸಹಕಾರಿ ಗೃಹ ನಿರ್ಮಾಣ ಯೋಜನೆಯಲ್ಲಿ, ಬೆಂಗಳೂರಿನಲ್ಲಿ ತಮಗೊಂದು ಸ್ಲ್ಯಾಟ್ ಬೇಕೆಂದು ಅರ್ಜಿಸಲ್ಲಿಸಿದ್ದರು. ಅದು ಅವರ ನಿವೃತ್ತಿಯ ನಂತರ ಮಂಜುರಾಗಿ ಬಂದಿತು. ನನ್ನ ತಂದೆಯಂತೂ ಸರಸ್ವತಿಯ ಪಕ್ಕಾ ಔರಸಪುತ್ರರು. ಜೀವಮಾನದಲ್ಲೇ ಲಕ್ಷ್ಮಿ ಒಲಿಯದ ಗುಂಪಿನವರು ! ಅವರು ಆ ಸ್ಲ್ಯಾಟನ್ನು ಕೊಳ್ಳುವಂತೆ ತಮ್ಮ ಮಗನ, ಹಿರಿಯ ಅಳಿಯನ ಮನ ಒಲಿಸಲು ನೋಡಿದರು. ಅದರಲ್ಲಿ ವಿಫಲರಾದಾಗ ನನ್ನನ್ನು ವಿಚಾರಿಸಿದರು. ಊರಿಂದೂರಿಗೆ ವರ್ಗಾವರ್ಗಿಯ ಜೀವನ ನಡೆಸುತ್ತಿದ್ದ ನಾನು, ಯಾರಿಗೂ ಬೇಡವಾದ ಸ್ಲ್ಯಾಟನ್ನು ಊರಲ್ಲೇ ಇರದವರು ಕೊಳ್ಳಲು ಹಣ ಎಲ್ಲಿದೆ ? ಎಂದು "ಬಾಯಿ" ಮಾಡಿದ್ದೆ. ಎಲ್ಲ ಶಾಂತವಾದಾಗ, ರಾಯರು ಮೆಲುದನಿಯಲ್ಲಿ ಯಾರಿಗೂ ಬೇಡವಾದರೆ ಅದು ತನಗಿರಲಿ, ಎಂದು ಮಾವನಿಗೆ ಸೂಚಿಸಿದರು. ಅವರ "ಶಾಶ್ವತ ನಿಧಿ"ಯಿಂದ ಐದು ಸಾವಿರ ರೂಪಾಯಿಗಳನ್ನು ಕೊಟ್ಟರು. "ನಮ್ಮ ಭವಿಷ್ಯವೇ ಇತ್ಯರ್ಥವಾಗಿರದಾಗ ಬೆಂಗಳೂರಿನಲ್ಲಿ ಭೂಮಿ ಖರೀದಿಸಿ ಏನು ಮಾಡುತ್ತೀರಾ?" ಎಂದು ಕೇಳಿದ್ದೆ. "ಆ ಭೂಮಿಗೆ ಹೊಟ್ಟೆ ಬಟ್ಟೆ ಪೂರೈಸಬೇಕಾಗಿಲ್ಲ. ಸಾಲಮಾಡಿ, ಕೊಂಡ

ದ್ದಲ್ಲ ಬಿದ್ದಲ್ಲಿಯೇ ಇರುತ್ತದೆ. ಹಣದುಬ್ಬರ ಪೆಚ್ಚಾದಂತೆ, ಭೂಮಿಯ ಬೆಲೆ ಗಗನಕ್ಕೇರುತ್ತದೆ. ಬೇರೇನೂ ಮಾಡಲಾಗದಿದ್ದರೆ ಮುದಿವಯಸ್ಸಿನಲ್ಲಿ ಅಲ್ಲೊಂದು ಗುಡಿಸಲು ಕಟ್ಟಿಕೊಂಡು ಇರೋಣ" ಎಂದು ಸಂತೈಸಿದ್ದರು. ಇದು ನಡೆದದ್ದು 1967–68ರಲ್ಲಿ.

ಇವರ ಭವಿಷ್ಯವಾಣಿ ನಿಜವಾಗಲಾರಂಭಿಸಿತು. ಬೆಂಗಳೂರಿನಲ್ಲಿ ಭರದಿಂದ ಭಾರೀ ಉದ್ದಿಮೆಗಳು ತಲೆಯೆತ್ತಲಾರಂಭಿಸಿದವು. ಮಹಾ ನಗರದ ಜನವಸತಿಯ ಜೊತೆಗೆ ಭೂಮಿಯ ಬೆಲೆ ದಿನೇ ದಿನೇ ಏರಲಾರಂಭಿಸಿತು. ನಮ್ಮದಾದ ಕಿರಿಯುಗಲ ಜಾಗವನ್ನು ಕೊಳ್ಳಲು ಸೆರೆ ಕೆರೆಯುವರು ಒತ್ತಾಯ ತರಲಾರಂಭಿಸಿದರೆ, ನೀಯತ್ತಿಲ್ಲದವರು ಅತಿಕ್ರಮಣ ಮಾಡಲು ಮತ್ತೆ ಮತ್ತೆ ಯತ್ನಿಸಿದರು. ತಂತಿ ಬೇಲಿಯನ್ನು 3 ಬಾರಿ ಹಾಕಿದರೂ ಪ್ರಯೋಜನವಾಗಲಿಲ್ಲ. ಒಳ್ಳೇಮನೆಯನ್ನು ಕಟ್ಟಬೇಕೆಂದು ಕನಸು ಕಂಡ ಜಾಗವನ್ನು ಮಾರಲೇ ಬೇಕಾಯಿತು. ಆದರೆ ಅತಿಕ್ರಮಣ ಮಾಡಿದಾತ, ಹಿಂದೆಂದೊ ಕೊಟ್ಟ ಮೂಲಧನದಷ್ಟೆ ಹಣವನ್ನು 'ಹಾನಿಭರ್ತಿ'ಯ ರೂಪದಲ್ಲಿ ಕೊಡುವಷ್ಟು ಔದಾರ್ಯ ತೋರಿದ! ಹೀಗಾಗಿ ಇನ್ನುಳಿದ ಹಣ, ಲೋಕದ ಇತರರಿಗೆ ಉಳಿತಾಯದ ಹಣ, ರಾಯರ ಲೆಕ್ಕದಲ್ಲಿ ಲಾಭವೇ!

ಮಲ್ಲೇಶ್ವರಂದಲ್ಲಿ ಕೇಂದ್ರ ಸರಕಾರಿ ನೌಕರರ ಸಹಕಾರಿ ಗೃಹ ನಿರ್ಮಾಣ ಸಂಸ್ಥೆ ರೂಪತಾಳಿದ್ದರಿಂದ ರಾಯರು ನಮ್ಮ ಸಲುವಾಗಿ ಫ್ಲ್ಯಾಟ್ ಒಂದನ್ನು ಕೊಳ್ಳಲು ನಿಶ್ಚಯಿಸಿದರು. ಆಗ ಕೊಂಚ ಜಾಸ್ತಿಯಾಗಿಯೇ ಕಂಡ ಮೊತ್ತದ ಬಗ್ಗೆ ನೊಂದು, "ಬೆಂಗಳೂರಿಗೆ ಬಂದ ಹೊಸದರಲ್ಲಿಯೇ ಸ್ಲ್ಯಾಟ್ ಒಂದನ್ನು ಕೊಂಡರೆ, ಎಷ್ಟೊಂದು ಹಣದ ಉಳಿತಾಯವಾಗುತ್ತಿರಲಿಲ್ಲವೇ?" ಎಂದು ಉದ್ಗರಿಸಿದ್ದೆ ಘಟನೆಯು ನಡೆದು ಹೋದ ನಂತರ ಎಲ್ಲರೂ ಜಾಣರಾಗುತ್ತಾರೆ. ಇನ್ನೂ ಹತ್ತು ವರ್ಷದ ನಂತರ ತಿರುಗಿ ನೀನು ಇದೇ ಮಾತನ್ನು ಹೇಳುವಂತೆ ಆಗಕೂಡದು, ಎಂದು ಈ ನಿರ್ಧಾರ ಕೈಕೊಂಡಿದ್ದೇನೆ. ಸಾರಾಸಾರವಾಗಿ ವಿಚಾರ ಮಾಡಿದರೆ, ಮಲ್ಲೇಶ್ವರಂದಲ್ಲಿ ಮೂರು ಬೆಡ್‌ರೂಂಗಳ ಮನೆ ನಿನಗೆ 'ಭೂಸಾ' ಬೆಲೆಯಲ್ಲಿ ದೊರಕಲಿದೆ.........ಎಂದು ಘೋಷಿಸಿದಾಗ ಬೆಚ್ಚಿ ಬಿದ್ದೆ. "ನಮಗೆ ಇಷ್ಟು ದೊಡ್ಡ ಮನೆಯ ವಾಸಸ್ಥಳ

ಕೇವಲ ಎರಡುವರೆ ಸಾವಿರ ರೂಪಾಯಿಗಳಿಗೆ ಸಿಗಲಿದೆ, ಎಂದು ನುಡಿದಿದ್ದರು. ಈಗ ಇದನ್ನು ನಂಬುವದೇ ಕಷ್ಟ. ಆದರೆ ಇದು ಸತ್ಯ ಸಂಗತಿ. ನಾವು ಮಾರಿದ ಭೂಮಿಯನ್ನು ಮೂಲ ಬೆಲೆಗೆ ಕೊಂಡದ್ದು ಐದು ಸಾವಿರಕ್ಕೆ. ಅದನ್ನು ಮಾರಿದ ಅರ್ಧ ಬೆಲೆಗೆ ಈಗಿನ "ಫ್ಲಾಟ್" ಸಿಗಲಿದೆ. ಅಂದರೆ ನನ್ನ ಜೇಬಿನಿಂದ ಖರ್ಚಾದದ್ದು ಎರಡುವರೆ ಸಾವಿರ ರೂಪಾಯಿಗಳು, ಎಂದರ್ಥವಾಗಲಿಲ್ಲವೇ ? ಉಳಿದ ಹಣದಿಂದ ಏನೆಲ್ಲ ಕೊಳ್ಳಬಹುದು ಎಂದು ಯೋಚಿಸು" ಎಂದು ವಿವರಿಸಿದರು.

'ಮದುವೆ ಮಾಡಿಕೊಂಡು ನೋಡು, ಮನೆ ಕಟ್ಟಿ ನೋಡು' ಎಂಬ ನಾಣ್ಣುಡಿಯನ್ನು ಸಂಪೂರ್ಣವಾಗಿ ಸುಳ್ಳಾಗಿಸಿದ ಶ್ರೇಯಸ್ಸು ರಾಯರದು. ಮದುವೆಗೂ ಹೊಸ ಬಟ್ಟೆ ಹೊಲಿಸಿಕೊಳ್ಳದ ಲಕ್ಷ್ಮೀಪುತ್ರರು ಇವರು ! ಮನೆ ಕೊಂಡದ್ದಾದರೂ ಹಾಗೇ. ಸಿಮೆಂಟಿನ ಬೆಲೆ ಗಗನಕ್ಕೇರಿದರೂ ನಮ್ಮ ಫ್ಲ್ಯಾಟ ನಿರ್ಮಾಣ ಸಂಸ್ಥೆಗೆ ಸರಕಾರಿ ದರದಲ್ಲೇ ಅದು ಲಭ್ಯವಾಗಿತ್ತು. ಅಲ್ಲದೇ ಸಹಕಾರಿ ಸೊಸಾಯಟಿಯವರು ತಮ್ಮ ಸದಸ್ಯರಿಗೆ ಹಣದುಬ್ಬರದ ಬಿಸಿ ತಗಲದಂತೆ, ಆರು ಫ್ಲ್ಯಾಟ್‌ಗಳನ್ನು ಸಾಹುಕಾರಿ ಬೆಲೆಯಲ್ಲಿ ಮಾರಾಟ ಮಾಡಿ, ಬಂದ ಲಾಭವನ್ನು ಗೃಹ ನಿರ್ಮಾಣಕ್ಕೆ ಜಮಾ ಮಾಡಿದರು. ಇದರಿಂದಾಗಿ, ಯಾರಿಗೇ ಆಗಲಿ ಹೊಟ್ಟೆ ಕಿಚ್ಚಾಗುವಷ್ಟು ಕಡಿಮೆ ಬೆಲೆಯಲ್ಲಿ ಮನೆ ನಮ್ಮದಾಯಿತು. ಇಷ್ಟಕ್ಕೇ ರಾಯರ ಅದೃಷ್ಟ ಬರಿದಾಗಲು ನಿರಾಕರಿಸಿತು. ನಮ್ಮ ಸೊಸಾಯಟಿಯವರು, ತಮ್ಮ ಮುಂದಿನ ಚಟುವಟಿಕೆಗಳನ್ನು ಕಾರ್ಯಗತಗೊಳಿಸಲು ಪ್ರತಿಯೊಬ್ಬ ಸದಸ್ಯನಿಂದ ಗೃಹನಿರ್ಮಾಣ ವೆಚ್ಚದ ಶೇಕಡಾ ಮೂರರಷ್ಟು ಠೇವಣಿ ಹಣ ಪಡೆದಿದ್ದರು. ಆದರೆ ಸರಕಾರಿ ಲೆಕ್ಕ ತಪಾಸಿಗರು ಸಹಕಾರಿ ಸಂಸ್ಥೆಗಳು ಲಾಭದಾಯಕ ಚಟುವಟಿಕೆಗಳಲ್ಲಿ ಆದಾಯಕರ ಕೊಡಬೇಕಾಗುತ್ತದೆ ! ಎಂದು ಎಚ್ಚರಿಸಿದ್ದರಿಂದ ಆ ಹಣವೂ ರಾಯರ ಜೇಬನ್ನು ಸೇರಿತು. ಗುತ್ತಿಗೆದಾರನ ಪಾಲಿನ ಹಣದ ಲೆಕ್ಕಾಚಾರ ಮಾಡಿದ್ದರಿಂದ ಒಪ್ಪಂದ ಮಾಡಿಕೊಂಡದ್ದರೆಂತ ತೀರ ಅಧಿಕ ಪ್ರಮಾಣದಲ್ಲಿ ಹಣ ಸಂದಾಯವಾಗಿದೆ ಎಂದು ಅರಿತ ಆಡಳಿತ ವರ್ಗದವರು ಅದನ್ನು ವಸೂಲು ಮಾಡಿದ್ದರಿಂದ, ರಾಯರಿಗೆ ಶೇಕಡಾ ಹತ್ತರಷ್ಟು ಹಣಪಾವತಿ

ಮಾಡಿದರು. ಸಂಸ್ಥೆಯು ಬ್ಯಾಂಕಿನಲ್ಲಿ ಇಟ್ಟ ಹಣಕ್ಕೆ ಬಡ್ಡಿ ಸಿಕ್ಕಿದ್ದರಿಂದ ಅದರ ಪಾಲೂ ಬಂದಿತು. ಇತರರ ಪಾಲಿಗೆ ದಕ್ಕದ 'ಸಹಕಾರ ಸಂಸ್ಥಾ ಲಕ್ಷ್ಮೀ' ರಾಯರ ಪಾಲಿಗೆ ನಿಜಕ್ಕೂ ಧನಲಕ್ಷ್ಮೀಯಾಗಬೇಕೇ ?

ಪ್ರತಿ ವರ್ಷ, ತಿಂಗಳು, ದಿನಗಳಲ್ಲಿ ಸಾಮಗ್ರಿಗಳ ಬೆಲೆ ಏರುತ್ತಲೇ ಇರುವದು, ಭಾರತೀಯ ಅರ್ಥವ್ಯವಸ್ಥೆಯ ವೈಶಿಷ್ಟ್ಯ. ಆದರೆ ಪ್ರತಿ ಸಲವೂ ಬೆಲೆಯೇರಿಕೆಯ ಬಿಸಿ ರಾಯರನ್ನು ತಟ್ಟುವದೇ ಇಲ್ಲವೆಂದು ಅನಿಸುತ್ತದೆ. ನಗರ ಸಾರಿಗೆಯವರು ತಿಕೇಟಿನ ದರ ಏರಿಸಿದ್ದರಿಂದ ರಾಜಕಾರಣಿಗಳು, ಸರಕಾರಿ ನೌಕರರು, ಕಾರ್ಮಿಕರು, ಗ್ರಾಹಕರು ಪ್ರತಿಭಟಿಸಿದರೂ ರಾಯರು ಗೆಲುವಾಗಿಯೇ ಇದ್ದರು. ಯಾಕೆ ಗೊತ್ತೆ ? ಸಾರಿಗೆ ಸಂಸ್ಥೆಯು ಹೊಸ ಸೂತ್ರದ ಪ್ರಕಾರ ಕಡಿಮೆ ದೂರದ ಪ್ರಯಾಣ ಮಾಡುವವರ ತಿಕೇಟಿನ ಬೆಲೆಯಲ್ಲಿ ಕಡಿತ ಮಾಡಿ, ದೂರ ಪ್ರಯಾಣದ ದರದಲ್ಲಿ ಹೆಚ್ಚಳ ಮಾಡಿದ್ದರು. ಇಷ್ಟು ದಿನ ನಾಲವತ್ತು ಪೈಸೆ ಕೊಡುತ್ತಿದ್ದ ರಾಯರು, ಪ್ರಯಾಣಕ್ಕೆ ಈಗ ಕೇವಲ ಮೂವತ್ತು ಪೈಸೆ ಕೊಡುವಂತೆ ಆಯಿತು ! ಕುರಿ ಹಿಂಡುಗಳಂತೆ ತುಂಬಿದ ಬಸ್ಸುಗಳಲ್ಲಿ ಹತ್ತಿ ನಿಂತು ಪ್ರಯಾಣ ಮಾಡುವದು ನನಗೆ ಅಸಾಧ್ಯವಾಗಿದ್ದರಿಂದ ಆಟೋ ರಿಕ್ಷಾದಲ್ಲಿ ಪ್ರಯಾಣ ಮಾಡಬಹುದು ಎಂದುಕೊಂಡಿದ್ದರೂ ನನಗೆ ಅನಾರೋಗ್ಯ ಕಾಡಿತ್ತು. ಹೀಗಾಗಿ ಬೆಳಿಗ್ಗೆ ಬೇಗನೇ ಆಫೀಸಿಗೆ ಬಂದು ತಡವಾಗಿ ಮನೆ ಸೇರುವ ಸರಕಾರಿ ಅಧಿಕಾರಿಗೆ ಸಾರ್ವಜನಿಕ ಸೇವೆಯ ಹಿತದ ದೃಷ್ಟಿಯಿಂದ (!) ಕೊಡಮಾಡಿದ ಇಲಾಖೆಯ ಸವಲತ್ತು ಪಡೆದು ಆಫೀಸ ಕಾರಿನ ಅನುಕೂಲ ದೊರೆಯಿತು. ರಾಯರ ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು.

ಆದಾಯವೇ ಬಾರದ ಲೇಖಕನ ವೃತ್ತಿಯನ್ನು ತಮ್ಮದನ್ನಾಗಿಸಿಕೊಂಡದ್ದರಿಂದ ಸರಕಾರಕ್ಕೆ ರಾಯರಿಂದ ಆದಾಯಕರ ವಸೂಲ ಮಾಡುವ ಭಾಗ್ಯವೇ ಒದಗಿ ಬರಲಿಲ್ಲ ! ಆದರೆ ಲೆಕ್ಕಾಚಾರದಲ್ಲಿ ರಾಯರು ಪಕ್ಕಾ. ಆದಾಯ, ಖರ್ಚುಗಳನ್ನು ತಪ್ಪದೇ ಬರೆದಿಟ್ಟು, ಆರ್ಥಿಕ ವರ್ಷದ ಕೊನೆಯಲ್ಲಿ ಆದಾಯಕರ ಖಾತೆಗೆ ತಪ್ಪದೇ ವಿವರಗಳನ್ನು ಪೂರೈಸಿದಾಗಲೇ ಅವರಿಗೆ

ನೆಮ್ಮದಿ. ಆದರೆ ದುರ್ದೈವವಶಾತ್, ಕರಕೊಡುವವರ ಲೆಕ್ಕವನ್ನೇ ಸರಿಯಾಗಿ ತಪಾಸು ಮಾಡದ ಖಾತೆಯವರಿಗೆ, ಆದಾಯವೇ ಇಲ್ಲದವರ ಲೆಕ್ಕಾಚಾರ ಮಾಡಲು ಸಮಯ ಎಲ್ಲಿದೆ? ಇನ್ನು ಮುಂದೆ ನಿಮ್ಮ ಲೆಕ್ಕಾಚಾರ ಒಪ್ಪಿಸಬೇಡಿ ! ಎಂದು ಮೊದಲಿಗೆ ಜಬರಿಸಿ, ಆ ನಂತರ ವಿನಂತಿಸಿ, ರಾಯರ ಮನಸ್ಸನ್ನು ಇಲಾಖೆಯು ಒಲಿಸಿದಾಗ ಗೆಲುವಾದರು.

"ಉತ್ಪನ್ನ ಹೆಚ್ಚಿಸಲಾಗದಾಗ ಖರ್ಚು ಕಡಿಮೆ ಮಾಡಬೇಕು !" ಸಿದ್ಧಾಂತದಲ್ಲಿ ಇವರದು ಅಚಲ ವಿಶ್ವಾಸ. ಅಂತೆಯೇ ನನ್ನ ಆದಾಯ ಕರದಲ್ಲಿ ಕಡಿತ ಸಾಧ್ಯವಿದೆಯೇ ? ಎಂದು ಖಾತೆಯ ನಿಯಮಗಳನ್ನು ಅಭ್ಯಸಿಸಲಾರಂಭಿಸಿದರು. ಈ ಯತ್ನದಲ್ಲಿ ತುಂಬ ಸಫಲರಾದರು. ಪ್ರಾವಿಡೆಂಟ್ ಫಂಡಿಗೆ, ವಿಮೆಗೆ, ಸಣ್ಣ ಉಳಿತಾಯ ಯೋಜನೆಗೆ ಎಷ್ಟೆಷ್ಟು ಹಣ ಕಟ್ಟಬೇಕೆಂದು ಹೇಳಿಕೊಟ್ಟರು. ಆದಾಯಕರ ಕನಿಷ್ಟ ಮಿತಿಗೆ ತರಲು ಸೂಚನೆ ಕೊಟ್ಟರು. ಇವರ ಸಲಹೆಗಳನ್ನು ಆಪ್ತೇಷ್ಟರು ಪಡೆದು "ಶೂನ್ಯ ಆದಾಯಕರ ಪರಿಣತ"ರೆಂಬ ಬಿರುದು ಪಡೆದಿದ್ದಾರೆ.

ಏಕಮಾತ್ರ ಪುತ್ರನ ವಿದ್ಯಾಭ್ಯಾಸಕ್ಕೂ ರಾಯರು ಹಣ ಖರ್ಚು ಮಾಡಲಿಲ್ಲ. ಮಾಂಟೆಸರಿ ಅಲ್ಪ ವೆಚ್ಚದಲ್ಲಾಯ್ತು. ತಾವು ಕಲಿತ ಕಸಬಾ ಗಂಡು ಮಕ್ಕಳ ಕನ್ನಡ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಕೊಡಿಸಿದರು. ದೇಣಿಗೆ ದೋಚುವ ಇಂಗ್ಲಿಷ್ ಮಾಧ್ಯಮ ಶಾಲೆಗೆ ಸೇರಿಸದೇ ವಿದ್ಯಾವರ್ಧಕ ಸಂಸ್ಥೆಯ ಕನ್ನಡ ಮಾಧ್ಯಮ ಶಾಲೆಗೇ ಸೇರಿಸಿದರು. ಕಾಲೇಜ ಸೇರುವ ಹಂತದಲ್ಲಿ ಎಮ್.ಈ.ಎಸ್ ಸಂಸ್ಥೆಯವರ ಕಾಲೇಜಿನ ಇಂಟರವ್ಯೂಗೆ ಕರೆ ಬಂದಿತು. ಮುದಿ ಮಾವನೊಂದಿಗೆ ಮಗನನ್ನು ಕಳಿಸಿದರು. ಎಸ್.ಎಸ್.ಎಲ್.ಸಿ. ಯಲ್ಲಿ ಉತ್ತಮ ಅಂಕಗಳನ್ನು ಪಡೆದ ಕಿರಿಯನನ್ನು "ನೀನು ಕಾಮತ್‌ನಲ್ವೇನೋ ! ನಿನಗೇನು ಇಂಟರ್‌ವ್ಯೂ ಮಾಡೋದು ಹೋಗು ! ಕೊಂಕಣಿ ಹುಡುಗರು ಹುಟ್ಟಾ ಜಾಣರು" ಎಂದು ಒಂದೇ ನಿಮಿಷದಲ್ಲಿ ಹೊರಗೆ ಕಳಿಸಿದರಂತೆ. ಯಾವ ದೇಣಿಗೆಯೂ ಇಲ್ಲದೇ ಪ್ರವೇಶ ಸಿಕ್ಕಿತು. ಎಂಜಿನಿಯರಿಂಗ್ ಪ್ರವೇಶ ಕಾಲಕ್ಕೂ ಇತಿಹಾಸದ ಪುನರಾವೃತ್ತಿ

ಯಾಯಿತು. ಕೊಂಪ್ಯೂಟರ್ ಸ್ಯಾನ್ಸ ವಿಭಾಗದಲ್ಲಿ ವಿಪರೀತ ಬೇಡಿಕೆಯಿದ್ದು ಪ್ರವೇಶಕ್ಕೆ ಅತ್ಯಧಿಕ ದೇಣಿಗೆ ಬರುತ್ತಿದ್ದರೂ ಪ್ರಿನ್ಸಿಪಾಲ್ ಧನಂಜಯರು ಕಾಮತ್ ಕುವರನಿಗೆ ಪ್ರವೇಶ ಕೊಟ್ಟೇ ಬಿಟ್ಟರು. ತಾಂತ್ರಿಕ ಕಾಲೇಜಿಗೆ ಮಗನನ್ನು ಸೇರಿಸುವಾಗಲೂ ಲಕ್ಷ್ಮಿದೇವಿ ರಾಯರಿಂದ ಬೀಳ್ಕೊಡಲು ಒಪ್ಪಲೇ ಇಲ್ಲವೆಂದು ಮತ್ಸರ ಪಟ್ಟವರೆಷ್ಟೋ ! ಮಗನನ್ನು ಉಚ್ಚ ಶಿಕ್ಷಣಕ್ಕಾಗಿ ಅಮೇರಿಕೆಗೆ ಕಳಿಸಲು ನಿರ್ಧರಿಸಿದಾಗಲೂ ಲಕ್ಷ್ಮಿ, ರಾಯರ ಪಕ್ಷಪಾತಿ ಎಂದು ಸಿದ್ಧ ಮಾಡಿದಳು. ಪ್ರಾರಂಭದ ಖರ್ಚಿಗಾಗಿ ಅಮೇರಿಕನ್ ಡಾಲರಗಳೊಂದಿಗೆ ವಿಮಾನ ಮಾರ್ಗವಾಗಿ ಮಗನು ಅಮೇರಿಕೆಗೆ ಹೋದ ಎರಡೇ ತಿಂಗಳಿನಲ್ಲಿ ರೂಪಾಯಿಯನ್ನು ಅಪಮೌಲ್ಯ ಮಾಡಿದ್ದರಿಂದ ರಾಯರಿಗೆ ಶೇಕಡಾ ಐವತ್ತರಷ್ಟು ನಿವ್ವಳ ಉಳಿತಾಯ ಅಥವಾ "ಲಾಭ" ವಾಯಿತು. !

ಅಮೇರಿಕೆಯಲ್ಲಿ ವೈದ್ಯಕೀಯ ಚಿಕಿತ್ಸೆ ಭಾರೀ ದುಬಾರಿ. ಹೀಗಾಗಿ ಆರೋಗ್ಯದ ವಿಮೆ ಇಳಿಸದೇ ಬೇರೆ ಮಾರ್ಗವೇ ಇಲ್ಲ. ಇಷ್ಟೇ ಅಲ್ಲದೇ ಹಲ್ಲು, ಕಿವಿ, ಹೊಟ್ಟೆ ನೋವು, ಶೀತ ಜ್ವರಕ್ಕಾಗಿ ಬೇರೆ ಬೇರೆ ವಿಮಾ ಯೋಜನೆ ಗಳಿರುತ್ತವೆ. ಹೆರಿಗೆ ವೆಚ್ಚಕ್ಕೂ ವಿಮಾ ಕಂಪನಿಗೆ ಶರಣು ಹೋಗ ಬೇಕಾಗುತ್ತದೆ. ಹೀಗೆ ಮಾಡದಿದ್ದರೆ ಮುಂಬರುವ ಸಂಬಳವನ್ನೆಲ್ಲ ಸಾಲ ತುಂಬಲು ಬರೆದು ಕೊಡಬೇಕಾದ್ದು ಖಂಡಿತ. ಈ ಪಿಡುಗು ಭಾರತದಲ್ಲೂ ಹಬ್ಬಲಾರಂಭಿಸಿದೆ. ನೆಗಡಿಗಾಗಿ ನರ್ಸಿಂಗ್ ಹೋಂ ಸೇರಿಸಿ ಸಾವಿರಾರು ರೂಪಾಯಿ ಕಿತ್ತುಕೊಂಡ ಘಟನೆ ದಿನಂಪ್ರತಿ ನೋಡುತ್ತೇವೆ. ರಾಯರಿಗೆ ವಿಮಾ ಕಂಪನಿ, ನರ್ಸಿಂಗ್ ಹೋಂ ದಕ್ಷತೆಗಳಲ್ಲಿ ಮೊದಲಿನಿಂದ ವಿಶ್ವಾಸ ವಿಲ್ಲದ್ದರಿಂದ ಇವಕ್ಕೆ ಶರಣು ಹೋಗಬೇಕಾಗಿ ಬರಲಿಲ್ಲ ಇಷ್ಟೇ ಅಲ್ಲ "ಅನಾರೋಗ್ಯಧಾಮ"ವಾದ ನನ್ನ ಚಿಕಿತ್ಸೆಗೂ ಅವರಿಗೆ ಕಾಸು ಖರ್ಚು ಮಾಡುವ ಪ್ರಮೇಯ ಬರಲಿಲ್ಲ. ಜೈಪುರ್‌ದಲ್ಲಿ ಸಾವು-ಬದುಕುಗಳ ನಡುವೆ ನನ್ನ ಜೀವ ಉಯ್ಯಾಲೆಯಾಡುತ್ತಿದ್ದಾಗ ಅಲ್ಲಿಯ ಝುನಾನಾ ಆಸ್ಪತ್ರೆಯ ಡಾ| ಚಂದ್ರಾವತಿ ಸಕ್ಸೇನಾ ಅವರು ಮಧ್ಯರಾತ್ರಿ ತುರ್ತು ಆಪರೇಷನ್ ಮಾಡಿ ಬದುಕಿಸಿದರೂ ಒಂದು ಪೈಸಾ ಚಾರ್ಜ್ ಮಾಡಲಿಲ್ಲ. ಬೆಂಗಳೂರಿನ

ವಾಣಿವಿಲಾಸ ಆಸ್ಪತ್ರೆಯ ಡಾ| ರುದ್ರಮ್ಮನವರು ನಾಲ್ಕು ಗಂಟೆಯ ಗಂಭೀರ ರೂಪದ ಆಪರೇಶನ್, ಕಿಂಚಿತ್ ಹಣದಾಸೆಯಿಲ್ಲದೇ ನೆರವೇರಿಸಿಕೊಟ್ಟರು. ಸಂಧಿವಾತ ಎಂದು ನರಳುತ್ತಿದ್ದಾಗ ಪ್ರಸಿದ್ಧ ಆಯುರ್ವೇದ ವೈದ್ಯ, (ಇವರು ಅಲೋಪಥಿ ಪರಿಣತರೂ ಹೌದು) ಡಾ| ಜಯಪ್ರಕಾಶ ನಾರಾಯಣರು ಒಂದು ವರ್ಷದ ಸುದೀರ್ಘ ಚಿಕಿತ್ಸೆಗೆ ಒಂದು ಬಿಡಿಗಾಸು ತೆಗೆದುಕೊಳ್ಳಲಿಲ್ಲ. ಹಲವು ಬಾರಿ ಲೇಹ, ತೈಲಗಳನ್ನೂ ಉಚಿತವಾಗಿ ಕೊಡ ಮಾಡಿದ್ದಾರೆ. ಗಂಟಲು, ಮೂಗು, ಕಿವಿ ತಜ್ಞ ಡಾ| ಸುಬ್ಬಯ್ಯನವರು, ಎಲುಬು ರೋಗ ತಜ್ಞ ಡಾ| ಕೆ.ಟಿ. ಸುರೇಂದ್ರ, ಹೃದ್ರೋಗ ತಜ್ಞ ಡಾ| ಪರಮೇಶ್ವರ ಮೊದಲಾದವರೆಲ್ಲ ಸಲಹೆ ಚಿಕಿತ್ಸೆಗಳ ಫೀ ಪಡೆಯಲು ನಿರಾಕರಿಸಿಬಿಟ್ಟರು. ಲಕ್ಷ್ಮಿದೇವಿ ರಾಯರನ್ನು ಬಿಟ್ಟು ಹೋಗಲು ನಿರಾಕರಿಸಿದ್ದೇ ಹೀಗಾಗಲು ಕಾರಣ ಎಂದು ಬೇರೆ ಹೇಳಬೇಕೇ ?

ದೊಡ್ಡ ಮೊತ್ತವಷ್ಟೇ ಅಲ್ಲದೇ ದಿನಂಪ್ರತಿ ಸಾಮಾನುಗಳನ್ನು ಖರೀದಿಸುವಾಗಲೂ ಲಕ್ಷ್ಮಿ ತಮ್ಮಿಂದ ಆಗಲದಂತೆ ರಾಯರು ಸದಾ ಜಾಗರೂಕರಾಗಿರುತ್ತಾರೆ. ತಮ್ಮ ಯಾವತ್ತೂ ಬರವಣಿಗೆಯನ್ನು ಬಾಂಡ್ ಪೇಪರ ಮೇಲೆ ಮಾಡುತ್ತಾರೆ. ಆದರೆ ಅದನ್ನು ಅಗ್ಗದಲ್ಲಿ ಕೊಳ್ಳುವ ಅವರ ವಿಧಾನ ಗೊತ್ತೆ ? ಹಳೇ ಕಾಗದದ ಅಂಗಡಿಯವನು ರದ್ದಿಯಲ್ಲಿ ಬಂದ ಎಕ್ಸಿಕ್ಯೂಟಿವ್ ಬಾಂಡ್ ಹಾಳೆಗಳನ್ನು ಇವರಿಗಾಗಿಯೇ ಬೇರ್ಪಡಿಸಿ ಇಟ್ಟಿರುತ್ತಾನೆ. ರೇಖಾ ಚಿತ್ರಗಳಿಗೆ ಬೇಕಾಗುವ ಡ್ರಾಯಿಂಗ್ ಹಾಳೆಗಳನ್ನು ರವಿವಾರಕ್ಕೊಮ್ಮೆ ಸೇರುವ ಗುಜರಿ ಸಂತೆಗೆ ಬರುವ ಶಾಲಾ-ಕಾಲೇಜ ವಿದ್ಯಾರ್ಥಿಗಳ ಜರ್ನಲ್‌ಗಳ ರದ್ದಿಯಿಂದ ಆರಿಸಿ ಖರೀದಿಸುತ್ತಾರೆ. ಛಾಯಾಗ್ರಹಣ ಮಾಡುವ ತೀಟಿ ಹೆಚ್ಚಾದಾಗ ಕಂಪನಿಯವರ ಬಳಕೆಯ ಅವಧಿ ಮೀರಿದ ಫಿಲ್ಮ ಮತ್ತು ರಸಾಯನಗಳನ್ನು ಅರ್ಧ ಬೆಲೆಗೆ ಕೊಂಡು ತರುವರು. ಹಣ ಉಳಿತಾಯದ ಇನ್ನೂ ಹಲವು ಪ್ರಕಾರಗಳನ್ನು ರಾಯರು ತಮ್ಮವನ್ನಾಗಿ ಮಾಡಿಕೊಂಡಿದ್ದಾರೆ. ಬೆರಳಚ್ಚಿನ ರಿಬ್ಬನ್ ಹಳೆಯದಾದಾಗ ಅದನ್ನು ಮಶಿಯಲ್ಲಿ ಅದ್ದಿ ಒಣಗಿಸಿ ತಿರುಗಿ ಬಳಸುತ್ತಾರೆ. ಉರಿದು ಹೋದ ವಿದ್ಯುತ್ ಬಲ್ಬಿನ ತಲೆಗೆ, ಗುದ್ದಿ ಸರಿಪಡಿಸಿ ತಿರುಗಿ ಬೆಳಕು ಬೀರುವಂತೆ

ಒಲಿಸುತ್ತಾರೆ. ನಲ್ಲಿಯ ನೀರು ಸರಾಗವಾಗಿ ಹರಿಯಲು ನಿರಾಕರಿಸಿದಾಗ
ಅದನ್ನೆಲ್ಲ ಬಿಡಿಸಿ, ಒಳಗೆ ಶೇಖರವಾದ ಮಣ್ಣು-ಕಲ್ಲುಗಳನ್ನು ತೆಗೆದು ಸ್ವಚ್ಛ
ಮಾಡುವರು. ವಿದ್ಯುತ್ ಪೂರೈಕೆಯಲ್ಲಿ ತೊಂದರೆಯಾದರೆ ಪ್ಲಾಯರ್
ಸ್ಕ್ರೂ ಡ್ರಾಯವರ್‌ಗಳನ್ನು ಹಿಡಿದು ಕಾರ್ಯೋನ್ಮುಖಿಯಾಗಿ ಬಿಡುತ್ತಾರೆ
ಮೋಜಿನ ಮಾತೆಂದರೆ ನಾವು ಕೊಂಡ ಹೊಸ ಮನೆಯಲ್ಲಿಯ ಬಚ್ಚಲಿನ
ಥಳಕಿನ ಹಂಚುಗಳನ್ನು ಗಟ್ಟಿಯಾಗಿ ಜೋಡಿಸದೇ ಇದ್ದುದರಿಂದ ಅವು
ಒಂದೊಂದಾಗಿ ಬಿಚ್ಚಿಕೊಂಡು ಬರಲಾರಂಭಿಸಿದ್ದವು. ರಾಯರು ಒಂದು
ಕೆ.ಜಿ. ಬಿಳಿ ಸಿಮೆಂಟ್ ತಂದು ಅವುಗಳನ್ನು ಸ್ವಸ್ಥಾನದಲ್ಲಿ ಸ್ಥಾಪಿಸಿದಾಗ
ಆಶ್ಚರ್ಯ ಸಂತೋಷಗಳಾಗಿದ್ದವು. ನಿಮ್ಮಲ್ಲಿ ಯಾರಿಗಾದರೂ ತಮ್ಮ
ಉತ್ಪನ್ನವನ್ನು ಲಾಭದಾಯಕವಾಗಿ ಬಳಸಿ ಲಕ್ಷ್ಮೀ ಕೃಪೆಗೆ ಪಾತ್ರರಾಗುವ
ಇಚ್ಛೆ ಇದ್ದರೆ ರಾಯರ ಹತ್ತಿರ ಸಲಹೆ ಪಡೆಯಬಹುದು. ಇದಕ್ಕಾಗಿ ಅವರು
ಒಂದು ಚಿಕ್ಕಾಸನ್ನೂ ಕೇಳುವದಿಲ್ಲ !

C

# ಉಪ್ಪಿನಕಾಯಿಯ ಹಾಬಿ



ಹವ್ಯಾಸದ ಹಪಾಪಿಯುಳ್ಳವರು ಏನನ್ನು ಮಾಡಿಯಾರು, ಏನು ಮಾಡಲಿಕ್ಕಿಲ್ಲ, ಎಂದು ಕಟ್ಟುನಿಟ್ಟಾಗಿ ಹೇಳುವದು ಕಷ್ಟ. ಹಿಂದಿನವರು ಹವ್ಯಾಸಗಳಿಗೆ ದಾನ–ಧರ್ಮದ ರೂಪುಕೊಟ್ಟು ತೋರ್ಪು ಮಾಡಿಸುತ್ತಿದ್ದರು. ದಾರಿಹೋಕರಿಗೆ ನೆರಳು ಸಿಗಲೆಂದು ರಸ್ತೆಗಳ ಇಕ್ಕೆಲದಲ್ಲಿ ವೃಕ್ಷಗಳನ್ನು ನಡೆಸಿದರು. ವೃಕ್ಷಾರೋಪಣ ಕೈಕೊಂಡು ಧರ್ಮಸಂತೆ, ಧರ್ಮಾರ್ಥಕೆರೆ–ಕಾಲುವೆ–ಉದ್ಯಾನಗಳನ್ನು ಮಾಡಿಸಿದರು. ಆದರೆ ಇಂದು ಸಾರ್ವಜನಿಕರ ಗಿಡಮರಗಳನ್ನು ಕಡಿಯುವದೇ ಒಂದು ತಂಡದವರು ಹವ್ಯಾಸವನ್ನಾಗಿ ಮಾಡಿಕೊಂಡರೆ, ಅವುಗಳನ್ನು ಉಳಿಸಿ, ಬೆಳೆಸಿ ಎಂದು ಘೋಷಣೆಗಳನ್ನೇ ತಮ್ಮವನ್ನಾಗಿ ಇನ್ನೊಂದು ಬಣದವರು ಸ್ವೀಕರಿಸಿದ್ದಾರೆ. ಮಹಿಳೆಯರು ಅಂತರ್‌ರಾಷ್ಟ್ರೀಯ ಕ್ರಿಕೆಟ್ ಆಟದಲ್ಲಿ ಪಾಲುಗೊಳ್ಳಬೇಕೆಂದು ಕನಸು ಕಂಡರೆ, ಸ್ತ್ರೀ–ಪುರುಷರು ಎಡ್ಮಂಡ್ ಹಿಲೇರಿಯಂತೆ ಪರ್ವತಾರೋಹಿಗಳಾಗ

ಹೊರಟು ಆದೆಷ್ಟೊ ಜನ, ಜೀವಕ್ಕೆ ಸಂಚಕಾರ ತಂದುಕೊಂಡದ್ದುಂಟು. ವಾಯುವೇಗದ ವಾಹನಗಳ ಓಟ, ಗಗನಚುಂಬಿ ಕಟ್ಟಡಗಳಿಂದ ಜಿಗಿತ ಹಾರುವ ವಿಮಾನಗಳಿಂದ ಭೂಮಿಗೆ ಜಿಗಿತಗಳಿಂದ ತಮ್ಮ ಶೌರ್ಯವನ್ನು ಪ್ರದರ್ಶಿಸಲಾರಂಭಿಸಿದ್ದಾರೆ. ನಮ್ಮ ಮದುವೆಯಾದಾಗ, ಸಿಗುವ ಅಲ್ಪ ವಿದ್ಯಾರ್ಥಿವೇತನದಲ್ಲೆ, ಅಮೇರಿಕೆಯ 35 ರಾಜ್ಯಗಳನ್ನು ಸಂಚರಿಸಿ, ಪ್ರಸಿದ್ಧ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟು ಮುಗಿಸಿ, ದೊಡ್ಡ ಗ್ರಂಥ ರಾಶಿಯನ್ನು ಬೇರೆ ಖರೀದಿಸಿ ತಂದಿದ್ದಾರೆ, ಎಂಬ ಸಮಾಚಾರದಿಂದ ಪತಿಯ ಬಗ್ಗೆ ತುಂಬ ಹೆಮ್ಮೆ ತಾಳಿದ್ದೆ. ಸಲಿಗೆಯಾದ ನಂತರ, "ನಿಮ್ಮ ಹವ್ಯಾಸವೇನು ?" ಎಂದು ಆತುರದಿಂದ ಕೇಳಿದ್ದೆ, ನನ್ನನ್ನೂ ತನ್ನಂತೆಯೇ ದೇಶಗಳನ್ನು ಸಂಚಾರಕ್ಕೆ ಕರೆದೊಯ್ಯಬಹುದೆಂಬ ನಿರೀಕ್ಷೆಯಲ್ಲಿ—

"ನನ್ನ ಹವ್ಯಾಸವೇ ! ಉಪ್ಪಿನ ಕಾಯಿಯ ಉತ್ಪಾದನೆ !!" ಬೆಚ್ಚಿ ಬೀಳುವಷ್ಟು ತೀವ್ರತೆಯಿಂದ ರಾಯರು ಉತ್ತರಿಸಿದ್ದರು. ಉಪ್ಪಿನಕಾಯಿ ಹಾಕಲು ಬಾರದ ನನ್ನ ಅಜ್ಞಾನಕ್ಕೆ ಬರೆಯೆಳೆದಂತೆ. ಅಲ್ಲಲ್ಲ, ಗಾಯಕ್ಕೆ ಉಪ್ಪು ಹಾಕಿದಂತೆ. ಇದು ಪರಿಹಾಸವೆಂದು ನಂಬಿ ಆ ಕ್ಷಣಕ್ಕೆ ನೊಂದುಕೊಂಡರೂ ನಂತರದ ದಿನಗಳಲ್ಲಿ ಅವರಿಗೆ ಉಪ್ಪಿನಕಾಯಿಯ ಉತ್ಪಾದನೆ ನಿಜಕ್ಕೂ ಪರಮಾನಂದ ನೀಡುವ ಹವ್ಯಾಸವೆಂದು ದೃಢಪಟ್ಟಿತು.

ಜೈಪುರ್ (ರಾಜಸ್ಥಾನ್)ದಲ್ಲಿ ಹೊಸದಾಗಿ ಸಂಸಾರ ಹೂಡಿದ್ದೆವು. ರವಿವಾರದ ಸಂತೆಯಲ್ಲಿ ಹಣ್ಣು-ಕಾಯಿಪಲ್ಲೆ ಖರೀದಿಸಲು ಚಿಲ್ಲರೆ ಹಣ, ಕೈಚೀಲಗಳೊಂದಿಗೆ ಕಳಿಸಿದರೆ, ಕಟುಕರು ಬಳಸುವ ಹರಿತಾದ ಕತ್ತಿ, ಬಲಿತು ಗೊರಟು ಬೆಳೆದ ಮಾವಿನಕಾಯಿಗಳೊಂದಿಗೆ ಹಿಂದಿರುಗಿದಾಗ ಸಿಡಿಮಿಡಿಗೊಂಡೆ. ಅದನ್ನು ಪರಿಗಣಿಸದೇ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಧಾಟಿಯಲ್ಲಿ ಪತ್ನಿಗೆ ಸಮುಝಾಯಿಶಿ ನೀಡಲಾರಂಭಿಸಿದರು. "ರಾಜಸ್ಥಾನಿಗಳು ಉಪ್ಪಿನಕಾಯಿ ಮಾಡುವ ರೀತಿಯೇ ಬೇರೆ. ನಮ್ಮೂರಿನಲ್ಲಿ ಅಪ್ಪೆಮಿಡಿ (ವಿಶಿಷ್ಟ ಗಮ, ಸೋನೆಯುಳ್ಳ ಮಿಡಿಮಾವಿನಕಾಯಿ) ಭಾರವಾದ ಚಪ್ಪಣೆ (ಭಾರ ಹಾಕಿ ಕಾಯಿಗಳನ್ನು ಚಪ್ಪಟೆಮಾಡಿ ಕಾಯ್ದಿರಿಸುವ ವಿಧಾನ)ಗೆ ಒಳಪಡಿಸಿ, ಮಸಾಲೆ ಮೆಡ್‌ಕುಟ್ ಸೇರಿಸಿ ಚಪ್ಪರಿಸಿ ಭಕ್ಷಿಸುತ್ತೇವಲ್ಲವೇ ? ಆದರೆ ಗಂಡುಗಲಿ ರಾಜಸ್ಥಾನಿಗಳು, ಮಿಡಿಕಾಯಿಯಲ್ಲಿ ವಿಶ್ವಾಸವಿಡದೆ, ತಮ್ಮಂತೆ

ಬಲಿತ ಕಾಯಿಗಳನ್ನೇ ಖರೀದಿಸಿ ಈ "ಪೆಸ್" ಕತ್ತಿಯಿಂದ ತುಂಡರಿಸಿ, ಅದರಲ್ಲಿ ಮಸಾಲೆ ತುಂಬಿ ಬಿಸಿಲಲ್ಲಿ ಒಣಗಿಸುತ್ತಾರೆ. ಅದನ್ನು ತಿನ್ನುತ್ತ ಹೋದಂತೆ ಬಿಡಲು ಮನಸ್ಸು ಬಾರದೇ ಗೊರಟೆ ಚೀಪುತ್ತ ಚೀಪುತ್ತ ಊಟವನ್ನೇ ಮರೆತುಬಿಡುವ ಪ್ರಸಂಗ ಬರುವದೂ ಉಂಟು. ನನ್ನ ಉಪ್ಪಿನಕಾಯಿ ಸಿದ್ಧ ವಾಗಲಿ. ಆಗ ನೀನೇ ಅದರ ಮಹಿಮೆ ನೋಡುವಿಯಂತೆ" ಎಂದು ಕಾಯಿ ಗಳನ್ನು ಕತ್ತರಿಸಲಾರಂಭಿಸಿದರು. ಉಪ್ಪಿನಕಾಯಿ ಸಿದ್ಧವಾಗುತ್ತಿರುವಾಗಲೇ ಅದರ ಆಕರ್ಷಕ ಬಣ್ಣ, ಸುವಾಸನೆಗಳಿಂದ ಬಾಯಿ ನೀರೂರಿ ಹತ್ತಾರು ಹೋಳುಗಳು ಹೊಟ್ಟೆಯನ್ನು ಸೇರಿದ್ದವು. ಇವರಿಗಂತೂ ಊಟಕ್ಕಷ್ಟೆ ಅಲ್ಲದೇ ಕಾಫಿ-ತಿಂಡಿಗಳ ಜೊತೆಗೂ ನೆಂಜಿಕೊಳ್ಳಲು ಅದು ಬೇಕೇ ಬೇಕು. ಉಪ್ಪಿಟ್ಟು ಪೂರಿ-ಪಲ್ಯ, ಒಗ್ಗರಿಸಿದ ಅವಲಕ್ಕಿಗಳ ಜೊತೆಗೆ ಒಂದೆರಡು ಹೋಳು ಇದ್ದರೆ ರುಚಿಯೇ ಬೇರೆ ! ಅನ್ನುವರು.

ಇನ್ನೊಮ್ಮೆ ಒಂದು ಕಿಲೋಗ್ರಾಂ ಬೃಹದಾಕಾರದ ಬೆಳ್ಳುಳ್ಳಿಯನ್ನು ಕೊಂಡುತಂದರು. ಜೊತೆಗೆ ತೀರಾ ಚಿಕ್ಕ ಈರುಳ್ಳಿಗಳು." ಅಯ್ಯಪ್ಪ ! ನೂರು ಗ್ರಾಂ ಬೆಳ್ಳುಳ್ಳಿಯ ಗಂಧವನ್ನೆ ತಡೆಯಲಾಗದಾಗ, ಇಷ್ಟೊಂದನ್ನು ತಿಂದು, ಕಾಯ್ದಿಡುವದು ಬೇರೆ ಹೇಗೆ ?" ಎಂದು ಅಸಹಾಯಕತೆ ತೋಡಿಕೊಂಡೆ. "ಸ್ವಲ್ಪ ತಾಳಿ ಅಮ್ಮಾವ್ರೇ ! ಕಂಗಾಲಾಗಬೇಡಿ. ಈ ಪೊಟ್ಟಣದಲ್ಲಿ ಕತಾಂಜಿ (ಈರುಳ್ಳಿ ಬೀಜ) ಇವೆ. ಎರಡನ್ನೂ ಬಳಿಸಿ ಉಪ್ಪಿನಕಾಯಿ ತಯಾರಾ ಯ್ತೆಂದರೆ ನೆರೆಮನೆಯವರು ಒಂದು ತೊಳೆಯನ್ನೂ ಬಿಡಲಿಕ್ಕಿಲ್ಲ ! ಎಂದು ವಿವರಿಸಿದರು. ಅವರ ಮಾತು ನಿಜವಾಯ್ತು. ವಾಕರಿಕೆ ಎನಿಸುವ ಬೆಳ್ಳುಳ್ಳಿಯಿಂದ ಉತ್ಕೃಷ್ಟ ಉಪ್ಪಿನಕಾಯಿ ಸಿದ್ಧವಾಗಿತ್ತು. ತಮ್ಮ ಯಶಸ್ವಿ ಪ್ರಯೋಗಗಳಿಂದ ಪುಲಕಗೊಂಡ ರಾಯರು, ಮನೆಯನ್ನು ಒಂದು ಉಪ್ಪಿನಕಾಯಿ ಕಾರ್ಖಾನೆಯನ್ನಾಗಿ ಮಾರ್ಪಡಿಸಿದರು.

ಹೂಕೋಸು, ನವಿಲುಕೋಸು, ಹಾಗಲಕಾಯಿ, ಶಲಜಮ್ ಮೊದ ಲಾದವುಗಳು ಉಪ್ಪುಕಾರ ಬಳಿದುಕೊಂಡು ಊಟದ ತಟ್ಟೆಯಲ್ಲಿ ಮೆರೆಯ ಲಾರಂಭಿಸಿದವು. ಚಟ್ನಿ, ಚಟ್ನಿಪುಡಿ, ಹಪ್ಪಳ-ಸಂಡಿಗೆ, ಬೆಣ್ಣೆ-ಜಾಮ್‌ಗಳ ಸ್ಥಾನವನ್ನು ಉಪ್ಪಿನಕಾಯಿ, ಆಕ್ರಮಿಸಿ ಬಿಟ್ಟಿತು. ಇಡ್ಲಿ-ದೋಸೆಗಳಿಗೆ

ಉಪ್ಪಿನಕಾಯಿ ರಸ ಬಳಸಿದರೆ, ಬ್ರೆಡ್ ಹಲ್ಲೆಗಳ ನಡುವೆ ರಸ+ಹೋಳು ಗಳನ್ನು ಓರಣವಾಗಿ ಜೋಡಿಸಿ ರುಚಿಕಟ್ಟಾಗಿ ತಿನ್ನುತ್ತಿರುವಾಗ ನೋಡುವವರ ಬಾಯಲ್ಲಿ ನೀರೂರುತ್ತದೆ. "ಆಯ್ತು, ನಾನು ವ್ಯಂಜನಾದಿಗಳ ತಲೆ ಕೆಡಿಸಿ ಕೊಳ್ಳಬೇಕೆಂದಿಲ್ಲ. ಚಹಾ-ಕಾಫಿ ಮಾಡ ಬೇಕೆಂದಿಲ್ಲ. ಮೂರೂ ಹೊತ್ತು ಉಪ್ಪಿನಕಾಯಿ ಬಡಿಸಿದರಾಯ್ತು !" ಎಂದು ಹಾಸ್ಯ ಮಾಡಿದಾಗ 'ಅಂಥ ದಿನ ಗಳು ಬೇಗ ಬರಲಿ, ಎಂದು ಹಾರೈಸುತ್ತೇನೆ" ಎಂದು ಬಾಯಿ ಮುಚ್ಚಿಸುವರು.

ಪಶ್ಚಿಮ ಬಂಗಾಲದ ಪ್ಲಾಸಿ ಹಳ್ಳಿಯಲ್ಲಿ ಉಪ್ಪಿನಕಾಯಿ ಮಾಡಲು ಬೇಕಾದ ಯಾವ ಸಾಮಗ್ರಿಯೂ ಇರಲಿಲ್ಲ. ಆದರೆ ಬೆಳೆಸಿಕೊಂಡು ಬಂದ ಈ ಹವ್ಯಾಸದ ಕೈ ಬಿಡಲಾದಿತೇ ? ಹಿತ್ತಲಲ್ಲಿ ಲಿಂಬೇ ಗಿಡವಿತ್ತು. ಆದರೆ ಕಾಯಿಗಳನ್ನೆ ಕಂಡ ಕಂಡವರು ಕದ್ದೊಯ್ಯುತ್ತಿದ್ದರು. ಹಣ್ಣು ಪಡೆ ಯುವದು ಕನಸಿನ ಮಾತೇ ! ರಾಯರ ಸಂಶೋಧಕ ಬುದ್ಧಿ ಚುರುಕಾಯ್ತು. ಗಿಡದಲ್ಲಿದ್ದ ಕಾಯಿಗಳನ್ನೆಲ್ಲ ಕಿತ್ತು ತಂದರು. ಪ್ರತಿಕಾಯನ್ನು ನಾಲ್ಕು ಹೋಳಾಗಿ ಕುಯ್ದರು. ಉಪ್ಪು ನೀರಲ್ಲಿ ಹಾಕಿ ಚೆನ್ನಾಗಿ ಕುದಿಸಿದರು. ನಂತರ ಸೋಸಿದಾಗ ನೀರಿನ ಜೊತೆಗೆ ಕಹಿ ಲವಣಗಳೂ ಕಳೆದು ಹೋಗಿ, ಒಂದೇ ವಾರದಲ್ಲಿ ಸಿದ್ಧವಾದ ಉಪ್ಪಿನಕಾಯಿ, ವಿಶಿಷ್ಟ ರುಚಿಯನ್ನು ಪಡೆ ದಿತ್ತು. ನೆರೆಮನೆಯ ಚಟರ್ಜಿ, ಬಿಶ್ವಾಸ್, ಕಾರ್ ಕುಟುಂಬಗಳಿಗೆ ಸ್ವಲ್ಪ ಸ್ವಲ್ಪ ಹಂಚಿದ್ದಾಯ್ತು. ಅವರೆಲ್ಲ ಬಾಯಿ ಚಪ್ಪರಿಸಿ ಹೊಡೆದು, ಎರಡೇ ದಿನದಲ್ಲಿ ಬಾಟ್ಲಿ ತೊಳೆದಿಡಬೇಕಾಯಿತು. ಇದರಿಂದ ರಾಯರ ಉಪ್ಪಿನ ಕಾಯಿ ಪ್ರಸಿದ್ಧಿ ಪಡೆಯಿತು. ಅಲ್ಲಿಯವರೆಗೆ ('ಪುಕಾ ಬಾಬು' ಕೀಟ ಪಂಡಿತ) ಆಗಿದ್ದವರು. 'ಅಟಾರ್ ಬಾಬು' (ಉಪ್ಪಿನಕಾಯಿ ಪರಿಣಿತ) ರೆನಿಸಿಕೊಂಡರು. ಬಂಗಾಲಿಗಳನ್ನು ಬೀಳ್ಕೊಂಡು ಕಾಲು ಶತಮಾನ ಜಾರಿ ಕೊಂಡಿದೆ. ಕಾಮಟಬಾಬುಗಳನ್ನು ಮರೆತರೂ ಅವರ ಉಪ್ಪಿನಕಾಯಿ ಮರೆತಂತಿಲ್ಲ. ಪೂಜಾ (ದುರ್ಗಾಪೂಜೆ-ದಸರಾ) ದಿನಗಳಲ್ಲಿ ಶುಭಾಶಯ ಕಾರ್ಡನ್ನು ಕಳಿಸುತ್ತಿರುತ್ತಾರೆ.

ಬೆಂಗಳೂರಿನಲ್ಲಿ ಬಿಡಾರ ಮಾಡಿದ ಮೇಲೆ ರಾಯರ ಹವ್ಯಾಸಕ್ಕೆ

ಕೋಡು ಮೂಡಿದಂತೆ ಆಯಿತು. ಕೆ.ಆರ್. ಮಾರ್ಕೆಟ್, ಯಶವಂತಪುರ ಗಳಲ್ಲಿರುವಂತೆ, ಮಲ್ಲೇಶ್ವರಂದಲ್ಲಿಯೂ ತರಕಾರಿ ಸಗಟು ವ್ಯಾಪಾರದ ಮಾರ್ಕೆಟು ಇದೆ ಎಂದು ಪತ್ತೆ ಹಚ್ಚಿದರು. ಅಲ್ಲಿ ಕಾರು, ಸ್ಕೂಟರುಗಳ ಮೇಲೆ ಬರುವ ಗಿರಾಕಿಗಳಿಗೆ ಹೆಚ್ಚಿನ ಬೆಲೆಗೆ ತರಕಾರಿ ಮಾರುವ ಸಾಲು ಅಂಗಡಿಗಳಿದ್ದರೆ, ಕಾಲು ನಡಿಗೆಯವರಿಗೆ ಮೀಸಲಾದ, ಸ್ಪರ್ಧಾ ಬೆಲೆಗೆ ನೀಡುವ ರಸ್ತೆ ಅಂಚಿನ ವ್ಯಾಪಾರಿಗಳೂ ಇದ್ದಾರೆ, ಎಂದು ಅರಿತು ಖುಷಿ ಪಟ್ಟರು. ನಿತ್ಯದ ಅಡಿಗೆಗೆ ತರಕಾರಿ ಬೇಕಿರಲಿ, ಬೇಡದಿರಲಿ, ಪ್ರತಿ ಸಂಜೆಯೂ ರಾಯರು ಐದಾರು ಚೀಲಗಳನ್ನೆತ್ತಿಕೊಂಡು ಹೊರಟೇ ಬಿಡುವರು. ಕೃಷಿಕರು ಹಳ್ಳಿಗಳಿಂದ ಲಿಂಬೇಹಣ್ಣುಗಳನ್ನು ಗೋಣೀ ಚೀಲ ಗಳಲ್ಲಿ ತುಂಬಿ, ಹೊಲಿದು ಬೆಂಗಳೂರಿಗೆ ಸಾಗಿಸುವದು ವಾಡಿಕೆ. ಖಾಸಗಿ ಬಸ್-ಲಾರಿಗಳಲ್ಲಿ ಅವನ್ನು ಹತ್ತಿಸಿ ಇಳಿಸುವಾಗ ಹಲವಾರು ಹಣ್ಣುಗಳಿಗೆ ಏಟು ಬೀಳುವದು ಸ್ವಾಭಾವಿಕ. ಕಿರುಕೋಳ ಮಾರಾಟಗಾರರು ದೊಡ್ಡ, ಮಧ್ಯಮ, ಚಿಕ್ಕ ಹಣ್ಣುಗಳನ್ನು ಬೇರ್ಪಡಿಸುವಾಗ 'ದಾಗು'ಗಳನ್ನು ಬೇರೆಯೇ ಒಟ್ಟೆ ರಾಶಿ ಹಾಕುವರು. ಇವನ್ನು ಹೊಟೇಲಿನವರು ಖರೀದಿಸು ವದು ವಾಡಿಕೆ. ರಾಯರು ಅಂಥ ಗಿರಾಕಿಗಳಲ್ಲಿ ಒಬ್ಬರಾದ್ದರಿಂದ 'ಕಾಮತ್ ಹೊಟೇಲಿನ ಕಾರ್ಮಿಕರು, ಎಂದು ತರಕಾರಿಯವರು ನಂಬಿದಂತೆ ಇತ್ತು. ಹಲವು ಬಾರಿ ಸಕಾಲದಲ್ಲಿ ಮಾರಾಟವಾಗದೇ ಉಳಿದ ಲಿಂಬೇ ಹಣ್ಣುಗಳು ಉರಿಬಿಸಿಲಿಗೆ ಒಣಗಿ ಅನಾಕರ್ಷಕವಾಗಿ ಬಿಡುವವು. ಅಂಥವನ್ನು ರಾಯರಿಗೆ ಮಾರಲು, ಅವರು ಬರುವ ಹಾದಿಯನ್ನೇ ತರಕಾರಿಯವರು ಕಾಯುವದು ಸಾಮಾನ್ಯವಾಯಿತು. "ಇವು ಚೆನ್ನಾಗಿಲ್ಲ, ಬೇಡ" ಅಂದರೆ "ಸ್ವಾಮೀ, ಎಲ್ಲ ಹೋಟ್ಲಿನವರು ಕೊಳ್ಳುವದು ಇಂಥ ಹಣ್ಣನ್ನೇ ! ಎಂದು ಮನಗಾಣಿಸಲು ಯತ್ನಿಸುತ್ತಾರೆ. ನನ್ನದು ಯಾವ ಹೋಟ್ಲೂ ಇಲ್ಲವಯ್ಯಾ' ಎಂದಾಗ ಹೋ ! ಅರ್ಥವಾಯ್ತು ಸ್ವಾಮಿ. ಲಿಂಬೇಹಣ್ಣಿನ ಉಪ್ಪಿನಕಾಯಿ ಸಿದ್ಧ ಮಾಡಿ ಅಂಗಡಿಯವರಿಗೆ ಸಪ್ಲೈ ಮಾಡ್ತೀರಿ ! ಹಾಗಿದ್ರೆ ಒಂದೂ ಕಾಸು ಕೊಡ್ಬೇಡಿ. ಒಂದು ಬಾಟ್ಲಿ ಉಪ್ಪಿನಕಾಯಿ ಕೊಟ್ಟರೆ ಸಾಕು', ಎಂದು ಕೈ ಚೀಲ ಎಳೆದು ಇದ್ದಷ್ಟು ಲಿಂಬೇ ಹಣ್ಣುಗಳನ್ನು ಸುರಿದೇ ಹಿಂದಿರುಗಿಸುತ್ತಾನೆ.

ಮಳೆಗಾಲದಲ್ಲಿ ಹೇರಳೆ ಕಾಯಿಗಳು ಅಗ್ಗವಾಗಿ ಸಿಗುವದರಿಂದ, ಅವನ್ನು ಕೊಂಡು ತಂದು, ಕೊಯ್ದು ಉಪ್ಪನ್ನು ಸೇರಿಸಿ ಇಡುವರು. ಹಸಿಮೆಣಸಿನಕಾಯಿಯ ಬೆಲೆ ಕುಸಿದಾಗ ಅವನ್ನು ಅದರೊಡನೆ ಸೇರಿಸಿ, ಬೇಸಿಗೆಯ ದಿನಗಳು ಬಂದಾಕ್ಷಣ, ಹಲವಾರು ಹರಿವಾಣಗಳಲ್ಲಿ ಉಪ್ಪಿನ ಕಾಯಿಯನ್ನು ಹರವಿ ಒಣ ಹಾಕುವರು. ಅದಕ್ಕೆ ಖಾರ, ಮಸಾಲೆ ಒಗ್ಗರಣೆಯೆಣ್ಣೆ ಹಾಕಿದರೆ ತಿನ್ನಲು ಸಿದ್ಧ. ಒಂದೇ ಹೋಳಿನಿಂದ ಇಡೀ ಊಟ ಮುಗಿಸಬಹುದು. ಕರಾವಳಿಯಲ್ಲಿ ಜಿಡ್ಡಾಗಿ ಬಾಯಿರುಚಿ ಕಳೆದು ಕೊಂಡಾಗ ಮಾತ್ರ ಕಷ್ಟ ಲಭ್ಯವಿದ್ದ ಈ ಉಪ್ಪಿನಕಾಯಿ ಇಲ್ಲಿ ಪ್ರತಿ ಊಟಕ್ಕೂ ಲಭ್ಯವೆಂದು ಹೆಮ್ಮೆಯಿಂದ ಹೇಳಿಕೊಳ್ಳುವದುಂಟು. ಲಿಂಬೆ ಹಣ್ಣಿನ ಉಪ್ಪಿನಕಾಯಿಗೆ ಸಂಭ್ರಮ ಹೆಚ್ಚು. ಅವುಗಳನ್ನು ಶುಭ್ರವಾಗಿ ತೊಳೆದು ಒಣ ಹಾಕಬೇಕು. ನಂತರ ದಾಗಾದ ಭಾಗವನ್ನು ಜಾಗರೂಕತೆ ಯಿಂದ ಬೇರ್ಪಡಿಸಿ, ಒಳ್ಳೆಯ ಭಾಗವನ್ನು ಉಪ್ಪಿಗೆ ಸೇರಿಸಬೇಕು. ಒಣ ಹಣ್ಣುಗಳನ್ನು ಕೊಯ್ದು, ರಸವನ್ನಷ್ಟೇ ಹಿಂಡಬೇಕು. ಜೊತೆಗೆ ಹಸಿಶುಂಠಿ, ಹಸಿಮೆಣಸಿನ ಕಾಯಿಗಳ ಚೂರುಗಳನ್ನು ಸೇರಿಸಬೇಕು. ಭರಣಿ ಇಲ್ಲವೇ ಬಾಟ್ಲಿಯಲ್ಲಿ ಹಣ್ಣು ಕೀಟ (ಡ್ರೊಸೊಫ್ಯಾಲ್) ಮೊಟ್ಟೆಗಳನ್ನು ಇಡದಂತೆ ಗಟ್ಟಿ ಮುಟ್ಟಾದ ಮುಚ್ಚಳ ಹಾಕಬೇಕು. ಇದಕ್ಕಾಗಿಯೇ ಗುಜರಿಗುತ್ತಿಗೆ ಯಲ್ಲಿ ಕೊಂಡ ಹತ್ತೆಂಟು ಡೊಳ್ಳು ಹೊಟ್ಟೆಯ ಬಾಟ್ಲಿಗಳಿವೆ. ಹೋಳು ಗಳನ್ನು ಉಪ್ಪಿಗೆ ಸೇರಿಸಿದ ದಿನಾಂಕಗಳನ್ನುಬಾಟ್ಲಿಯ ಮೇಲೆ ಬರೆದಿಟ್ಟು, ಸರಿಯಾದ ತಿಂಗಳುಗಳ ನಂತರ ಅದಕ್ಕೆ ಬೇರೆ ಬೇರೆ ಮಸಾಲೆ, ಅರಿಸಿನ, ಇಂಗಿನ ಎಣ್ಣೆ ಸೇರಿಸಿದಾಗಲೇ ಸಿದ್ಧ ಉಪ್ಪಿನಕಾಯಿಯಾಗುವದು. ಈ ಎಲ್ಲ ಚಟುವಟಿಕೆಗಳನ್ನು ರಾಯರು, ನಾನು ಆಫೀಸಿಗೆ ಹೋದನಂತರ ತಾವೊಬ್ಬರೇ ಮಾಡಿ ಮುಗಿಸುವರು. ತಮ್ಮ ಈ ಹವ್ಯಾಸದಿಂದ ನನಗೆ ತೊಂದರೆ ಯಾಗದಿರಲಿ, ಎಂದೋ ಇಲ್ಲವೇ ಉಪ್ಪಿನಕಾಯಿಯ ಗುಟ್ಟು ತಿಳಿಯದಿರಲಿ, ಎಂದೋ ಎಂಬುದನ್ನು ಈವರೆಗೆ ನಿರ್ಧರಿಸಲಾಗಿಲ್ಲ !

ಮೈದುನ ಉಮೇಶನ ಸಹೋದ್ಯೋಗಿ ಕಾರ್ಕಳದ ಶೇಷಗಿರಿಗೆ ರಾಯರ ಉಪ್ಪಿನಕಾಯಿಯಲ್ಲಿ ಪಾಲು ಸಿಕ್ಕಿತು. ಉತ್ತಮ ಗೃಹಿಣಿ ಅನಿಸಿಕೊಂಡ

ಅವರ ಶ್ರೀಮತಿಗೆ ನಾನು, ತಾನೆಂದು ಮನೆಯ ಮಕ್ಕಳು ರಾಯರ ಪ್ರಾಡಕ್ಟ್ ಮುಕ್ಕುವದನ್ನು ಕಂಡು ಅವಮಾನವೆನಿಸಿತು. ಒಂದೇ ದಿನದಲ್ಲಿ ಖಾಲಿಯಾದ ಬಾಟ್ಲಯನ್ನು ತೊಳೆದಿಡುವಾಗ, 'ನೀವೆಲ್ಲ ಉಪ್ಪಿನಕಾಯಿ ಇಷ್ಟಪಡದ್ದರಿಂದ, ಇಷ್ಟು ದಿನ ಅದನ್ನು ಮಾಡುವ ಗೊಡವೆಗೇ ಹೋಗಲಿಲ್ಲ. ಒಂದು ನೂರು ಲಿಂಬೇಹಣ್ಣು ಇಂದೇ ತಂದು ಕೊಡಿ, ಆಮೇಲೆ ನನ್ನ ಕೈಚಳಕ ನೋಡಿ!' ಎಂದು ಪತಿಗೆ ಸವಾಲು ಹಾಕಿದಳು. ಉತ್ತಮ ದರ್ಜೆಯ ಲಿಂಬೆ ಹಣ್ಣುಗಳನ್ನು ಶುಭ್ರವಾಗಿ ತೊಳೆದು ನೆರಳಲ್ಲಿ ಒಣಗಿಸಿದಳು. ಪೇಟೆಯ ಮೆಣಸಿನ ಪುಡಿ ಚೆನ್ನಾಗಿರುವದಿಲ್ಲವೆಂದು ಬ್ಯಾಡಗಿ ಮೆಣಸಿನಕಾಯಿಯನ್ನು ತರಿಸಿ, ಒಣಗಿಸಿ ಮನೆಯಲ್ಲಿಯೇ ಕುಟ್ಟಿಸಿ ಪುಡಿ ಮಾಡಿಸಿದಳು. ಸಾಸಿವೆ ತೊಳೆದು ಒಣಗಿಸಿ ಪುಡಿ ಮಾಡಿದ್ದಾಯ್ತು. ಉಪ್ಪನ್ನು ಹುರಿದು ಕುಟ್ಟಿದಳು. ಈಗ ಮಣೆ, ಪತೇಲಿ, ಚಮಚಗಳ ಮೇಲೆ ರೋಗಾಣು ಕುಳಿತು ಉಪ್ಪಿನಕಾಯಿ ಕೆಡದಂತೆ ಜಾಗ್ರತೆ ವಹಿಸಿದ್ದಾಯ್ತು. ಒಂದು ತಿಂಗಳನಂತರ ಬಾಯಿ ನೀರು ಬಿಡುತ್ತ ಇದ್ದ ಕುಟುಂಬದವರೆಲ್ಲ ಒಂದು ಹೋಳನ್ನು ಹೆಚ್ಚಾಗಿಯೇ ಹಾಕಿಸಿಕೊಂಡರೂ ಯಾರೂ ಒಂದನ್ನಾದರೂ ಮುಗಿಸುವ ಸಾಹಸ ಮಾಡಲೇ ಇಲ್ಲ! "ಏನೋ ಹೆಚ್ಚು ಕಡಿಮೆ ಆಗಿರಬೇಕು. ಬಹಳ ಕಾಲದವರೆಗೆ ತಯಾರಿಸದೇ ಇದ್ದುದರಿಂದ ಎಲ್ಲವನ್ನೂ ಮರೆತಂತಾಗಿದೆ" ಎಂದು ಕುಂಟು ನೆಪದ ಸಮಾಧಾನ ತಾಳಿ ಗೃಹಿಣಿ, ಬೆಲೆಬಾಳುವ ಲಿಂಬೆ ಹೋಳುಗಳನ್ನು ಕಸದ ತೊಟ್ಟಿಗೆ ಎಸೆಯಲು ಮನಸ್ಸು ಬಾರದೇ ಪಾತ್ರೆಗಳನ್ನು ಬೆಳಗುವಾಗ ಅವುಗಳ ಧಾರಾಳ ಉಪಯೋಗವಾಗುವಂತೆ ನೋಡಿಕೊಂಡಳು.

ಹಿಂದೊಮ್ಮೆ ತಾಯಂದಿರು ಮಾಡುತ್ತಿದ್ದ ಉಪ್ಪಿನ ಕಾಯಿಯನ್ನು ಮಗಳಂದಿರು ಪತಿಗೃಹಕ್ಕೆ ಒಯ್ಯುವ ಪರಿಪಾಠವಿತ್ತು. ಹೊರ ಊರುಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳು ಹೊಟೇಲ್ ಊಟ ರುಚಿಸದೇ ಊಟಕ್ಕೆ ಮೊದಲು ಮನೆಯ ಉಪ್ಪಿನಕಾಯಿ ಬಳಸುತ್ತಿದ್ದರು. ಆದರೆ ಕಾಲ ಬದಲಾಗಿದೆ. ಈಗ ಎಷ್ಟು ತಾಯಂದಿರಿಗೆ ಉಪ್ಪಿನಕಾಯಿ ಹಾಕುವ ಕಲೆ ರೂಢಿಸಿದೆ, ಎಂಬುದು ಗೊತ್ತಿಲ್ಲ. ಅಂತೆಯೇ ರಾಯರ ಉಪ್ಪಿನ ಕಾಯಿಗೆ

ಆಪ್ತ, ಬಂಧು, ಬಳಗದವರಿಂದ ವಿಪರೀತ ಬೇಡಿಕೆ ಬರಲಾರಂಭಿಸಿತು. ಅಲ್ಲದೇ 'ಗಂಡಸರು ಮಾಡಿದ್ದ ಉಪ್ಪಿನ ಕಾಯಿ' ಎಂದು ಖ್ಯಾತಿ ಪಡೆಯಿತು. ಪಂತಿ, ಪ್ರವಾಸ, ಯಾತ್ರೆಗಳಿಗೆ ಹೋಗುವಾಗಲೂ ರಾಯರ ಅಮೃತ ಹಸ್ತದ ಉಪ್ಪಿನಕಾಯಿ ಇದ್ದೇ ತೀರಬೇಕು. ಅದೆಷ್ಟೋ ಜನ ರಾಯರು ಮಾಡುವ ವಿಧಾನ ಬರೆದುಕೊಂಡರು. ಒಬ್ಬಿಬ್ಬರು ನಮ್ಮಲ್ಲಿಯೇ ಇದ್ದು ಕೊಂಡು ಒಂದೆರಡು ತಿಂಗಳು ತರಬೇತಿ ಪಡೆಯಲಿದ್ದರು. ಆದರೆ ಯಾವ ಶ್ರಮವನ್ನೂ ವಹಿಸದೇ ಉಪ್ಪಿನಕಾಯಿ, ಕೇಳಿದಾಗ, ಸಿಗುವಂತಿರುವಾಗ, ಯಾರು ತಾನೆ ಕೈ-ಮೈ ನೋಯಿಸಿಕೊಂಡಾರು ? ನಮ್ಮೂರಿನಲ್ಲಿ ಒಳ್ಳೆ ಲಿಂಬೆ ಹಣ್ಣು ಸಿಗುವದಿಲ್ಲವೆಂದು ಒಬ್ಬರು ಹೇಳಿದರೆ, ಉತ್ತಮ ಮಸಾಲೆಯ ಕೊರತೆ ನಮ್ಮಲ್ಲಿದೆ, ಇನ್ನೊಬ್ಬರೆಂದರು. ಕರಾವಳಿಯ ಉಪ್ಪೇ ಸರಿಯಿಲ್ಲದ್ದ ರಿಂದ ನಾವು ಮಾಡಿದ್ದು ಹಾಳಾಗುತ್ತದೆ ! ಮಗುದೊಬ್ಬಳು ಕೊನೆಯ ತೀರ್ಪು ಕೊಟ್ಟಳು. ರಾಯರ ಉಪ್ಪಿನಕಾಯಿ ಫ್ಯಾಕ್ಟರಿ ವರ್ಷವಿಡೀ ನಡೆಯುತ್ತಿತ್ತು.

ಈ ಪರಿಶ್ರಮದ ಲಾಭ ಪಡೆಯುವವರ ಸಂಖ್ಯೆ ಬೆಳೆಯುತ್ತಿರುವದು ಮನಸ್ಸಿಗೆ ಬರಲಿಲ್ಲ. ಅಂತೆಯೇ ಬೇಡಿಕೆ ಮುಂದೆ ಮಾಡಿದವರಿಗೆಲ್ಲ ಉಪ್ಪಿನಕಾಯಿ ಕಳಿಸುವ ಜವಾಬ್ದಾರಿಯನ್ನು ನಾನೇ ವಹಿಸಿಕೊಂಡೆ. ಅವರವರ ನಾಲಿಗೆಯ ಚಪಲಕ್ಕೆ ಅನುಗುಣವಾಗಿ ಮುಂಬಯಿಯ ಸುಪ್ರಸಿದ್ಧ ಬೇಡೇಕರರ ಹಸಿಮೆಣಸಿನಕಾಯಿ, ಮಾವಿನಕಾಯಿ, ಲಿಂಬೇಹಣ್ಣು ಮಿಶ್ರ ಉಪ್ಪಿನಕಾಯಿಯ ಪ್ರಕಾರಗಳನ್ನು ಖರೀದಿಸಿ, ರಶೀದಿಯೊಂದಿಗೆ ಬಾಟ್ಲಿ ಗಳನ್ನು ಪ್ರತಿಯೊಬ್ಬರಿಗೆ ಕಳಿಸಿದೆ. ನಿರೀಕ್ಷಿಸಿದಂತೆ ಅವರಿಂದ ಕೃತಜ್ಞತಾ ಪತ್ರವೂ ಬರಲಿಲ್ಲ. ಹಣವೂ ಬರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅನಂತರ ಯಾರಿಂದಲೂ ಉಪ್ಪಿನಕಾಯಿಗೆ ಬೇಡಿಕೆಯೂ ಬರಲಿಲ್ಲ. ಆದರೆ ಈ ಹೊಸ ಏರ್ಪಾಡು, ರಾಯರ ಮನಸ್ಸಿಗೆ ಎಳ್ಳಷ್ಟೂ ಬರಲಿಲ್ಲ. ಅಂತೆಯೇ ತಮ್ಮ ಅಚ್ಚುಮೆಚ್ಚಿನ ಹವ್ಯಾಸಕ್ಕೆ ತಿಲಾಂಜಲಿ ಕೊಟ್ಟು ಬಿಟ್ಟರು. 'ನಮ್ಮ ಮನೆಗೆ ಸಾಲುವಷ್ಟು ಉಪ್ಪಿನಕಾಯಿನಾದ್ರೂ ಮಾಡಿಕೊಡೀಂದ್ರೆ' ಎಂದು ದುಂಬಾಲು

ಬಿದ್ದಾಗ ಅದನ್ನು ತಿನ್ನಬಾರದು. ಅಲಸರ್, ಕ್ಯಾನ್ಸರ್‌ಗಳಿಗೆ ಆಮಂತ್ರಣ' ಎಂದು ಬಾಯಿ ಮುಚ್ಚಿಸಿ ಬಿಟ್ಟರು. ಈ ಪರಿವರ್ತನೆಯಿಂದ ಹಳ ಹಳಿಸುವಂತೆ ಆದರೂ ರಾಯರು ಮಾತ್ರ ಮನೆಯಲ್ಲಿ ಓಡಾಡುವ ಕೀಟಗಳ ವೀಕ್ಷಣೆಯನ್ನು ತಮ್ಮ ಹೊಸ ಹವ್ಯಾಸವನ್ನಾಗಿ ಬೆಳೆಸಿ ಕೊಂಡಿದ್ದಾರೆ !



# 'ಮಾರುತಿ' ಗೀಳು



ಇಂಜಿನಿಯರಿಂಗ್ ವಿದ್ಯಾರ್ಥಿಯಾಗಿ ಕಾಲೇಜು ಸೇರಿಕೊಂಡದ್ದೇ ನಮ್ಮ ಮಗ ವಿಕಾಸನಿಗೆ ತಾನು ಯಾಂತ್ರಿಕಯುಗದಲ್ಲಿ ದಾಪು ಕಾಲು ಇಟ್ಟ ಅರಿವು ಒಮ್ಮೆಲೇ ಆಯ್ತು. "ವೇಳೆಗೆ ವಿಪರೀತ ಮಹತ್ವ, ಪ್ರಾಕ್ಟಿಕಲ್ಸ್‌ಗೆ ಸಕಾಲಕ್ಕೆ ತಲುಪಬೇಕು. ನಡೆದು ಹೋದರೆ ಸುಸ್ತು. ಬಸ್ಸಿಗೆ ರಶ್ಮು!" ಏನೇನೊ ನೆಪ ಹೇಳಿ ತನಗೊಂದು ಸ್ಕೂಟರ್ ಅವಶ್ಯಕತೆ ಇದೆಯೆಂದು ತಂದೆಗೂ ನನಗೂ ಬಿಂಬಿಸಲು ಯತ್ನಿಸಿದ. ನಮ್ಮವರು ಬಗ್ಗಿಯಾರೇ ?

"ನಿನ್ನ ಕಾಲೇಜು 15 ನಿಮಿಷದ ನಡಿಗೆ. ಅಬ್ಬಾ ! ಎಂದರೆ ಇಪ್ಪತ್ತು ನಿಮಿಷ. ದಿನಾಲು ಅರ್ಧಗಂಟೆ ಬೇಗ ಎದ್ದೆಯೆಂದರೆ ಎಲ್ಲ ಸಮಸ್ಯೆ

ಬಗೆಹರಿಯುತ್ತೆ. ನಿಂಗೆ ನಡೆಯೋ ಅಭ್ಯಾಸ ಇಲ್ಲವೇ ಇಲ್ಲ....ಕಾರಿನಲ್ಲಿ ಹೋಗೋನು ಸಾಯಕಲ್ ಮೇಲೆ ಹೋಗಬೇಕು. ಸಾಯಕಲ್ ಕೊಳ್ಳೋ ಯೋಗ್ಯತೆ ಇರೋನೂ ಬಸ್ಸಿನಲ್ಲಿ ಹೋಗಬೇಕು. ಬಸ್ಸಿನಲ್ಲಿ ಹೋಗೋ ಯೋಗ್ಯತೆ ಇದ್ದವನು, ನಡೆದು ಹೋದರೇ ಜಾಣ. ದಿನಾಲು ನಡೆದು ಹೋಗೋ ಅಭ್ಯಾಸ ಮಾಡು. ನಡೆಯುವವನ ಭಾಗ್ಯ, ನಡೀತಾ ಇರುತ್ತೆ!" ಎಂದು ನನಗೆ ಮಾತ್ರ ಮೀಸಲಾಗಿರುತ್ತಿದ್ದ ಉಪದೇಶಾಮೃತವನ್ನು ಮಗನ ಮೇಲೂ ಕರೆದರು.

ವಿಕಾಸ, ಹಟಬಿಡದೇ ಸ್ಕೂಟರ್ ಬೇಡಿಕೆ ಮುಂದುವರಿಸಿದ. ಮೂರನೆಯ ಸೆಮೆಸ್ಟರ್ ಹೊತ್ತಿಗೆ ಸ್ಕೂಟರ್‌ನಿಂದ ಸಾಯಕ್‌ಕಲ್‌ಗೆ ತಂದೆಯನ್ನು ಒಪ್ಪಿಸೋದರಲ್ಲಿ ಯಶಸ್ವಿಯಾದ.

"ಗಟ್ಟಿಮುಟ್ಟಾದ ಬೈಸಿಕಲ್ ತೊಗೋ. ಆಡಂಬರಕ್ಕೆ ಮರುಳಾಗ ಬೇಡ. ನಿನ್ನ ಬೋರ್ಡ್ಸ್, ಇತರ ಸಲಕರಣೆಗಳನ್ನು ಸಲೀಸಾಗಿ ಒಯ್ಯುವಂತಿರಬೇಕು. ನಿನ್ನಮ್ಮ ನಾನು ಹಿಂದಿನ ಸವಾರಿ ಮಾಡಿದರೂ ಬೈಸಿಕಲ್ ಮುಗ್ಗರಿಸಬಾರದು !" ಎಂದೆಲ್ಲ ಇವರು ಮುಂಜಾಗ್ರತೆ ಹೇಳಿದರು.

ಆದರೆ, ಮನೆಗೆ ಬಂದ ಸಾಯಕ್‌ಕಲ್, ಅತ್ಯಾಧುನಿಕ ಮಾದರಿಯ "ಜಪಾನಿ" (ಇಮಿಟೇಶನ್) ಕ್ರೀಡಾ ಬೈಸಿಕಲ್ ಆಗಿತ್ತು. ಥಳಥಳಿಸುವ ಕಿತ್ತಳೆ ಬಣ್ಣ. ಲತಾಂಗಿಯನ್ನು ನೆನಪಿಸುವ ಬಳುಕಿಬಾಗುವ ನಡು. ಭರತ ನಾಟ್ಯಂ ನಟಿಯಂತೆ ಅಲುಗಾಡುತ್ತಲೇ ಇರುವ ಗೋಣನ್ನು ನೆನಪಿಗೆ ತರುವ ಹ್ಯಾಂಡಲ್ ಬಾರು. ಬೆರಳು ಹತ್ತಿದರೂ ಕುಣಿದು ಕುಪ್ಪಳಿಸುವ ಹ್ಯಾಂಡಲ್‌ಗೆ ನಾಜೂಕಾಗಿ ಕಟ್ಟಿದ ರೇಶ್ಮೆಗೊಂಡೆಗಳು. ನೋಡಲು ಸಾಕ್ಷಾತ್ ತನ್ವಂಗಿಯೇ !

"ಅಮ್ಮ, ಬೈಸಿಕಲ್‌ಗೆ ಒಳ್ಳೇ ಹೆಸರಿಡಬೇಕು. ಶೀಘ್ರವೇಗವನ್ನು ಸೂಚಿಸುವ ಹೆಸರು ಹೇಳು" ಎಂದು ವಿಕಾಸ ಕೇಳಿಕೊಂಡ.

"ಹವಾಮಹಲ್, ಹವಾಜಹಾಜ್ ?"

"ಬೇಡ, ಅದು ಗತಿಯನ್ನು ಸೂಚಿಸುವುದಿಲ್ಲ. ಅಲ್ಲದೇ ಹಿಂದೀ ಬೇಡ. ಕನ್ನಡ ಹೆಸರು ಬೇಕು" ಎಂದ.

ಅಮಿತಗತಿ, ಮನೋವೇಗ, ಪವನ್‌ವೇಗ ಎಂದೆಲ್ಲಾ ಹೇಳಿದೆ. ಅವನ್ನೆಲ್ಲ ಕಠಿಣವೆಂದ. "ಹನುಮಾನ್ ?" ಕೊನೆಗೆ ತಾನೇ ಅದನ್ನು "ಮಾರುತಿ" ಎಂದು ಹೆಸರಿಸಿದ. ಈಗಾಗಲೇ ಕಾರೊಂದಕ್ಕೆ ಆ ಹೆಸರಿದೆ ಯಲ್ಲಪ್ಪ ? ಎಂದರೆ ಬೈಸಿಕಲ್‌ಗೆ ಇಲ್ಲವಲ್ಲ ? ಎಂದು ಮನದಟ್ಟುಮಾಡಿದ. ಮರುದಿನವೇ ಕೆಂಪು ರಟ್ಟಿನಿಂದ ಮಾರುತಿಗೊಂದು ಮುಖವಾಡ ಮಾಡಿಸಿ ಸಾಯಕಲ್ ಮುಖಕ್ಕೆ ಬಿಗಿದ. ಮೈಸೂರು ರಸ್ತೆಯಲ್ಲಿ ಒಮ್ಮೆ ಪೆಡಲ್ ಮಾಡಿ ಹಾಯಬಿಟ್ಟನೆಂದರೆ ಅವನ ಕಾಲೇಜ ಎದುರಿಗೇ ನಿಂತುಬಿಡುತ್ತಿತ್ತಂತೆ ಮಾರುತಿ. ಅಲ್ಲದೇ ಅವನಿಗೆ ಹಸಿವಾದಾಗ ಹೊಟೇಲ್, ಬಾಯೊಣಗಿದಾಗ ಕೆಫಿಟೇರಿಯಾ, ಜ್ಯೂಸ್ ಸೆಂಟರ್ ಹತ್ತಿರ ವೇಗ ತಗ್ಗಿಸಿ ಬಿಡುವದು ಕ್ರಮೇಣ ಮಾರುತಿಗೆ ರೂಢಿಯಾಯಿತು. ಬಿಸಿ ನಿಪ್ಪಟ್ಟಿನ ಅಂಗಡಿಯೆದುರು ಥಟ್ಟನೇ ನಿಲ್ಲುವದು. ಎರಡನೇ ಶೋಗೆ ಹೋಗುವಾಗ ಸದ್ದುಮಾಡದೇ ತನ್ನ ಸೂಕ್ಷ್ಮ ಗಮನದ ಮಧುರನಾದದಿಂದಲೇ ಗೇಟನಾಚೆ ನಿಂತ ವಿಕಾಸನ ಗೆಳೆಯನನ್ನು ಪಿಸುನಾದದಿಂದಲೇ ಕರೆಯುವಷ್ಟು ನೈಪುಣ್ಯವನ್ನು ಮಾರುತಿ ಒಂದು ವಾರದಲ್ಲಿ ಪಡೆದಿತ್ತು. ಕಳ್ಳ ಬೆಕ್ಕಿನ ಹೆಜ್ಜೆ, ಚಿಗರೆಯೋಟ, ಹಾವಿನ ಹರಿದಾಟ, ಕಪ್ಪೆಯ ಕುಪ್ಪಳಿಸುವಿಕೆಗಳಲ್ಲೆಲ್ಲ ಮಾರುತಿ ಮಿಗಿಲೆನಿಸಿತು.

ಮಾರುತಿಯ ಆಗಮನದಿಂದ ವಿಕಾಸನ ತಿರುಗಾಟದ ತೀಟೆಗೆ ಹೊಸ ಆಯಾಮ ಬಂದಂತಾಯಿತು. ಹಗಲಿರುಳುಗಳ ತಾರತಮ್ಯವಿಲ್ಲದೇ ಅವನ ಸೇವೆಗೆ ಅದು ಟೊಂಕಕಟ್ಟಿ ನಿಂತಿತ್ತು.

"ಸ್ವಲ್ಪ ಗೋಧಿ, ಗಿರಣಿಗೆ ಹಾಕಿಸ್ಕೊಂಡು ಬಾರೋ !" ಎಂದರೆ "ಅಮ್ಮ ಇದು ಕ್ರೀಡಾ ಸಾಯಕಲ್, ಐದು ಕೆ. ಜಿ. ಹೊರುವ ತ್ರಾಣ ಅದಕ್ಕಿಲ್ಲ. ನೀನೂ ಹೊತ್ತು ದಣಿಯುವುದು ಬೇಡ. ಆಟೋ ಮಾಡಿ ಕೊಂಡು ಹೋಗಿಬಂದರೆ ನಿನಗೂ ಆರಾಮು ಮಾರುತಿಗೂ ಆರಾಮು" ಎಂದು ಸ್ವತಃ ಮಾರುತೀಪೀಠಸ್ಥನಾಗಿ ಹೊರಟೇ ಬಿಡುವ. ಇನ್ನು ಡಬಲ್ ರೈಯ್ಡ್ ಮಾಡುವದಾಗಲಿ, ಸಾಮಾನು ಸರಂಜಾಮು ಹೊರುವ ಗೋಜೇ ಇರಲಿಲ್ಲ. ಅದಕ್ಕೆ ಬ್ಯಾಕ್‌ಸ್ಟ್ಯಾಂಡ್ ಇರಲಿಲ್ಲವಲ್ಲ ?

"ಮಾರುತಿಯ ಆರೋಗ್ಯದ ದೃಷ್ಟಿಯಿಂದ ನೀನು ಅಡ್ಡ ಬರಬೇಡ ಜೋಕೆ!" ವಿಕಾಸನು ಸುಯ್ಯೆಂದು ಸಾಯಕಲ್ ತರುತ್ತಿದ್ದಂತೆ ಯಜಮಾನರು ಎಚ್ಚರಿಸಿದರು. ಆದರೂ ಕ್ಷಣದಲ್ಲಿ ಕಾಂಪೌಂಡಿನ ಒಂದು ಬದಿಗೆ ತಲೆ ಕೂದಲು ಒಣಗಿಸಿಕೊಳ್ಳುತ್ತ ನಿಂತ ನನಗೆ ಚಕ್ರ ಬಡಿದು ಆದರ ನಾಲ್ಕು ಹಲ್ಲು ಮುರಿದು ಬಿದ್ದವು. "ನೋಡಿದೆಯಾ ? ಕ್ರೀಡಾ ಸಾಯಕಲ್ ವೇಗಕ್ಕೆ ಹೆಸರಾದರೂ ಅಡ್ಡಾದಿಡ್ಡಿ ಬೆಳೆದ ಮನುಷ್ಯರ ಬಡಿತದ ಏಟು ತಡೆದುಕೊಳ್ಳಲಿಕ್ಕೆ ಅದಕ್ಕೆ ತ್ರಾಣವಿಲ್ಲ. ಹೀಗೆ ಇನ್ನೆರಡು ಬಾರಿ ನೀನು ಬಂದು ಬಡಿದರೆ........"

"ಮಾರುತಿಯ ಅವಸ್ಥೆ ಮುಗಿದಂತೆಯೇ !" ತಂದೆ-ಮಗ ಕೂಡಿಯೇ ಎಚ್ಚರಿಸಿದರು.

ತಿಂಗಲೊಪ್ಪತ್ತಿನಲ್ಲಿ ಟಾಯರ್ ಬದಲಾಯಿಸಬೇಕಾಯಿತು. ಮೈಸೂರಿನ ರಸ್ತೆಗಳೆಲ್ಲ ಹಳ್ಳಿಗಾಡಿನ ಕಾಲ್ದಾರಿಗಳಿಗಿಂತ ಕಳಪೆ ! ನ್ಯೂಯಾರ್ಕ್, ಟೋಕ್ಯೋಗಳಲ್ಲಿ ಹಾರಾಡುವ ಮಾರುತಿ ಇಲ್ಲಿ ಹೇಗೆ ತಾನೇ ಹೊಂದಿಕೊಂಡಾನು ? ಮರುಕದಿಂದ ಮಾರುತಿಗೆ ಬೇಕಾದ ಮರಮ್ಮತ್ (ರಿಪೇರಿ) ವಿಕಾಸ ಮಾಡಿಸಿದ.

ಮಳೆಗಾಲ ಕಳೆಯುವದರೊಳಗೆ ಮಾರುತಿಯ ಒಳಭಾಗದಲ್ಲಿ ಜಂಗು ಕಾಣಿಸಿಕೊಂಡಿತು.

ಮಲೆನಾಡಿನ ಆರ್ದ್ರತೆ ಮಾರುತಿಗೆ ಒಗ್ಗುವುದಿಲ್ಲ. ಟೋಕ್ಯೋ-ಬೊಂಬಾಯಿ ರಸ್ತೆಗೆ ಹೇಳಿ ಮಾಡಿಸಿದ್ದಲ್ಲವೇ ? ಎಂದು ಕೊಂಕು ನುಡಿದರೂ ತಿರುಗಿ ರಿಪೇರಿಗೆ ಕಾಸು ತೆರದೇ ನಿರ್ವಾಹವಿರಲಿಲ್ಲ.

ಎರಡು ವಾರಗಳ ನಂತರ ಸೀಟ್ ಬದಲಾಯಿಸಬೇಕಾಯಿತು. ಕಾರಣ ವಿಕಾಸನ ಗೆಳೆಯ "ಜಂಬೋ" ಮರೆತು ಬಂದ ನೋಟ್ಸ್ ತರಲು ಮಾರುತಿ-ಯನ್ನೇರಿ ಹಾಸ್ಟೆಲಿಗೆ ಹೋಗಿ ಬಂದದ್ದೇ ಆಗಿತ್ತು. "ಪಾಪ ! ನನ್ನ ತೂಕದ್ದೇ ರೂಢಿಯಾದ ಮಾರುತಿ, ಜಂಬೋನ ಎಪ್ಪತ್ತೆರಡು ಕೇಜಿ ಹೇಗೆ

ತಡೆದುಕೊಂಡಾನು !" ಎಂದು ತಿರುಗಿ ಹೊಸ ಆಸನವನ್ನು ವಿಕಾಸ್ ಹಾಕಿಸಿದ. ದಿನ ಹೋದಂತೆ, ಮಾರುತಿಯ ಹಲವಾರು ಕಾಯಿಲೆಗಳು ಕಾಣಿಸಿಕೊಂಡವು. ಪಂಕ್ಚರ್, ಹಲ್ಲುಮುರಿತ, ಹ್ಯಾಂಡಲ್ ಕುಸಿತ, ಹಿಂಗಾಲ ಹೊಡೆತ, ಗೋಣುಬಿರಿತ, ಒಂದೇ ಎರಡೇ !

ಆರು ತಿಂಗಳಲ್ಲಿ ರಿಪೇರಿ ಖರ್ಚು, ಕೊಂಡ ವೆಚ್ಚಕ್ಕಿಂತ ಇಮ್ಮಡಿಯಾಯ್ತು.

"ಮಾರಿಬಿಡೋ, ಗಟ್ಟಿಮುಟ್ಟಾದ ಬೈಸಿಕಲ್ ಕೊಳ್ಳೆಂದರೆ, ಈ ಲಿಡಬಿಡಕಿ ಆಟಿಗೆ ತಂದೆ. ಇನ್ನು ರಿಪೇರಿಗೆ ಹಣ ಕೊಡೋಲ್ಲ !" ಗದರಿಕೊಂಡೆ.

"ಮಾರಿಬಿಡ್ತೀನೆ ನೀನು ಹೇಳಿದಂತೆ, ಆದರೆ ಹಳೇದಾಗಿ ಕಂಡ್ರೆ ಯಾರೂ ಕೊಳ್ಳೋಲ್ಲ. ರಿಪೇರಿ ಮಾಡಿಸ್ತೀನಿ. ಪೇಂಟ್ ಮಾಡಿಸ್ತೀನಿ, ನಂತರ ಮಾರ್ತೀನಿ", ಮಾರುತಿಯ ಘನತೆಗೆ ಅನ್ಯಾಯವಾಗದಂತೆ ವಿಕಾಸ್ ನೋಡಿಕೊಂಡ.

ಈಗ ಕೆಂಬಣ್ಣ ತಾಳಿದ ಮಾರುತಿ ಮುಸುಡಿಗೆ ನೀಲಿಬಣ್ಣ. ಕಿರೀಟಕ್ಕೆ ಕುಚ್ಚು ಹೂ, ಕೊರಳಿಗೆ ಪಳ ಪಳ ಹಾರ ಹಾಕಿದ್ದರಿಂದ ಹಿರಿ-ಕಿರಿಯರೆಲ್ಲ ಕಣ್ಣುಬಿಟ್ಟು ನೋಡುವವರೇ ! ಆದರೆ ಕೊಳ್ಳಲು ಯಾರೂ ಬರಲಿಲ್ಲ. ಗೆಳೆಯ ವಾಸುಗೆ ದಂರೋಟು-ದೋಸೆ-ಕಾಫಿ ಕೊಡಿಸಿ ಮಾರಲು ಯತ್ನಿಸಿದ. ಡಬಲ್‌ರೈಡ್ ಮಾಡಿಸಿ ಮನೆತನಕ ಕರೆಕೊಯ್ದು ಬಿಟ್ಟಾಗ, "ಇನ್ನೊಮ್ಮೆ ಭೇಟಿ ಮಾಡುತ್ತೇನೆ" ಎಂದಾತ ತಿರುಗಿ ಮುಖ ತೋರಿಸಲಿಲ್ಲ.

ಸಹಪಾಠಿ ದುಬೆ ಬಂದು, ಮಾರುತಿ ಡುಬ್ಬ ಚಪ್ಪರಿಸಿ, ಗೋಣು ತಿರುಗಿಸಿ ವಾಹವ್ವಾ ! ಎಂದರೂ, ಅರ್ಧ ಬೆಲೆಗೆ ಕೊಡುತ್ತೇನೆಂದಾಗ ಬೇಡವೆಂದ.

ಮೈಸೂರುಪಾಕ್, ಬೋಂಡ ಆತಿಥ್ಯ ಪಡೆದ ಮೂರ್ತಿ, ಸಾಯಕಲ್ ಈಗ ಕೊಟ್ಟರು, ಕಂತಿನ ಮೇಲೆ ಮುಂದಿನ ವರ್ಷ ಮುಟ್ಟಿಸ್ತೀನಿ ಎಂದಾಗ

ಹಿಂದೆ ಮುಂದೆ ನೋಡಿದ ವಿಕಾಸ. ನಂತರ ಪರಿತಪಿಸಿದ. ಕೊಟ್ಟೇಬಿಟ್ಟರೆ ನೆಟ್ಟಗಿತ್ತು ಎಂದು.

ಮಾರುತಿ, ಇನ್ನೆರಡು ಅಪಘಾತಕ್ಕೆ ತುತ್ತಾಗಿ, ರಿಪೇರಿ ಹೊಂದಿ ನುಗ್ಗಾಗಿತ್ತು. ಕೊನೆಗೆ ಬಂದಷ್ಟು ಬೆಲೆ ಬರಲಿ, ಎಂದು ಗುಜರಿಗೆ ಒಯ್ದ ವಿಕಾಸ.

ಗುಜರಿ ಮಾಲಿಕ, ಅರ್ಧಗಂಟೆ ಕಾಯಿಸಿ, ಎಡಗೈಯಿಂದ ಮಾರುತಿಯ ಹಿಂಭಾಗಕ್ಕೆ ಬಡಿದ. ಅದರ ಮುಂಭಾಗ ಮುರಿದುಕೊಂಡೇ ನಿಂತಿತು. "ಹೋಗಲಿ, ಐವತ್ತು ಕೊಡಿ !" ಎಂದ.

ನೂರು ರೂಪಾಯಿ ನಿರೀಕ್ಷಿಸಿದ ವಿಕಾಸ, ಭೂಮಿಗೆ ಇಳಿದು ಹೋದ. ನಾನೇ ಕೊಡಬೇಕೇ ? ಎಂದ.

"ನೋಡಿ ಸ್ವಾಮಿ ! ಇದೆಲ್ಲಾ ಹಳೇ ಕಮಾಲು, ಒಂದೊಂದು ಪಾರ್ಟು ತೆಗೆದು ಮಾರಿದರೂ ನಾಲ್ಕಾಣೆ-ಎಂಟಾಣೆ ಗಿಟ್ಟೊಲ್ಲ. ಅಲ್ದೇ ಇದನ್ನು ಮಡಗಿಕೊಂಡಿದ್ದಕ್ಕೆ ಬಾಡಿಗೆ ಬೇರೆ ಕೊಡಬೇಕು. ಬೇಕಾದರೆ ಐವತ್ತು ಮಡಗಿ" ಗುಜರಿರಾಯ ಗುಡುಗಿದ.

ಮಗರಾಯ ನಿರ್ವಾಹವಿಲ್ಲದೇ ಸಾಯ್‌ಕಲ್ ತಳ್ಳಿಕೊಂಡು ಮನೆಗೆ ಬಂದ.

ಇಕ್ಕಟ್ಟಾದ ಮನೆ ಬಾಲ್ಕನಿಯಲ್ಲಿ ಮೂಲೆಯಲ್ಲಿ ಬಿಕೋ ! ಎಂದು ನಿಂತುಕೊಂಡ ಬೈಸಿಕಲ್ಲಿನಿಂದ ಎಲ್ಲರಿಗೂ ತೊಂದರೆಯೇ. ದಿನಾಲೂ ಬೈಸಿಕೊಂಡು ಕೊನೆಗೊಮ್ಮೆ ಚಿರಂಜೀವ ಕೇಳಿದ. "ಅಮ್ಮ ಇದನ್ನ ಹಾಗೇ ಕೊಡಲಿಕ್ಕೆ ತಯ್ಯಾರ್ ! ಏನು ಮಾಡಲಿ ?"

"ಅದಕಕ್ಯಾಕೋ ಇಷ್ಟು ತಲೆ ಕೆಡಿಸಿಕೊಳ್ತಾ ಇದ್ದಿ ? ರಾತ್ರೆ ಗೇಟ ಹೊರಗಿಡು. ಬೆಳಗಾಗೋದರೊಳಗೆ ಇರಲ್ಲ."

ಈ ಉಪಾಯವೂ ಫಲಿಸಲಿಲ್ಲ. ಯಾರೂ ಅದನ್ನು ಒಯ್ಯಲಿಲ್ಲ. ಮಾರುತಿ, ಮಾನ ಕಳೆದುಕೊಳ್ಳದೇ ವಿಕಾಸನ ಕೋಣೆಗೆ ಕಾವಲು ನಿಂತಿದ್ದ.

ಕೊನೆಗೊಮ್ಮೆ ನಮ್ಮ ಕುಮಾರರಾಮ, ಮಧ್ಯರಾತ್ರಿ ಮಾರುತಿಯನ್ನ ಹೆಗಲಮೇಲೆ ಹೊತ್ತು ಮನೆ ಪಕ್ಕದ ಕೆರೆಗೆ ಹಾಕಲೆಂದು ಹೋದ. ರಾತ್ರಿ ಬೀಟಿನ ಪೋಲಿಸನಿಂದ ಮನಸಾರೆ ಬೈಸಿಕೊಂಡು, "ಇನ್ನೊಮ್ಮೆ ಕಳ್ತನಾ ಮಾಡೊಲ್ಲ ಕಣಣ್ಣಾ !" ಎಂದು ಯಾಚಿಸಿ ಎರಡು ರೂಪಾಯಿ ಜೊತೆಗೆ ಮಾರುತಿಯನ್ನೂ ಅವನಿಗೊಪ್ಪಿಸಿ ನಿಶ್ಚಿಂತೆಯಿಂದ ಮರಳಿದ.

ವಿಕಾಸನು, ಈಗ ಮನೆಯಿಂದ ಏಳೇ ನಿಮಿಷದ ದಾರಿಯ ಆಫೀಸಿಗೆ ಸ್ಕೂಟರ್ ಓಡಿಸುತ್ತಿದ್ದಾನೆ. ಈ "ಮಾರುತಿ"ಯ ಇಂಧನ-ದಕ್ಷತೆ (ಫ್ಯುಯೆಲ್ ಎಫಿಶನ್ಸಿ) ಲೀಟರಿಗೆ ಇಪ್ಪತ್ತು ಕಿಲೋಮೀಟರ್, ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ.

o

# ಊಟಕ್ಕಿದ್ದರೂ ಲೆಖ್ಖಕ್ಕಿಲ್ಲ !



ನಡುರಾತ್ರಿಯಲ್ಲಿ ನುಸಿ ಜಿರಲೆ, ಹಲ್ಲಿಗಳು ಬೆದರುವಂತೆ ನನ್ನೊಳಗಿನ ಗೊರಕಾಸುರನು ಕರ್ತವ್ಯನಿರತನಾಗಿರಲು, ಯಾರೋ ಹೊರಬಾಗಿಲಿನ ಮೇಲೆ ಜೋರಾಗಿ ಗುದ್ದಿದಂತಾಗಿ ಬೆಚ್ಚಿಬಿದ್ದೆ. ಕ್ಯಾಮರಾದೊಂದಿಗೆ ಕಾಡಿಗೆ ಹೋಗಿದ್ದ ರಾಯರು ಹಿಂತಿರುಗಿರಬಹುದೇ ? ಛೇ ಇರಲಾರದು ! ನಿದ್ರಿಸುತ್ತಿರುವ ಪತ್ನಿಗೆ ತೊಂದರೆ ಕೊಡುವ ಬದಲಾಗಿ ತಮ್ಮೊಂದಿಗೆ ಒಯ್ದ ಕೀಲಿಕೈ ಬಳಸಿಯೇ ಒಳಗೆ ಬರುವ ಆಸಾಮಿ ಅವರು. ಇನ್ನೊಮ್ಮೆ ಜೋರಾಗಿ ಬಾಗಿಲು ಗುದ್ದಿದ ಸಪ್ಪಳ, ಜೊತೆಗೆ ಗುಸು ಗುಸು ಮಾತು. ರಾಯರು ಊರಲ್ಲಿಲ್ಲವೆಂದು ಅರಿತು ದರೋಡೆಕೋರರು ಧಾಳಿ ಮಾಡುತ್ತಿರಬಹುದೇ ? ಅವರು ಕರೆಗಂಟೆ ಬಳಸುವ ಬದಲಾಗಿ ಕೈ, ಕತ್ತಿಗಳನ್ನೇ ಬಳಸುತ್ತಾರೆಂದು ಡಿಟೆಕ್ಟಿವ್ ಕಾದಂಬರಿಯಲ್ಲಿ ಓದಿದ ನೆನಪು! ಕೂಡಲೇ ಕೈ ಕಾಲು ನಡುಗಲಾರಂಭಿಸಿದವು. ಛೇ ಇರಲಾರದು. ಬೇಕಾದಷ್ಟು ಮನೆಗಳು

ನಗರದ ಹೊರವಲಯದಲ್ಲಿ ಇರುವಾಗ ಮಲ್ಲೇಶ್ವರದ ಹೃದಯ ಸ್ಥಾನದಲ್ಲಿ ರುವ, ತೊಂಬತ್ತು ಸಂಸಾರಗಳಿಗೆ ಆಶ್ರಯ ಕೊಟ್ಟಿರುವ ಈ ಕಟ್ಟಡದಲ್ಲಿ ಹೊಕ್ಕು ದರೋಡೆಗೆ ಯತ್ನಿಸಲು ಅವರೇನು ಹುಚ್ಚರಾಸ್ಪತ್ರೆಯಿಂದ ತಪ್ಪಿಸಿ ಕೊಂಡು ಓಡಿ ಬಂದವರೇ ? ಕಾವಲುಗಾರನನ್ನು ಕೂಗೋಣವೆಂದರೆ ಅವನ ಸುಳಿವೇ ಇಲ್ಲ. ಪೋಲೀಸರಿಗೆ ತಿಳಿಸೋಣವೆಂದರೆ ಫೋನ್ ಮಾಡಲು ಕೈ ಮಂಜುಗಟ್ಟಿದಂತಾಗಿ ನಂಬರು ತಿರುಗಿಸಲು ಶಕ್ತಿ ಇಲ್ಲದಂತಾಗಿದೆ. ಒಂದೆರಡು ಸಲ ತಪ್ಪು ನಂಬರುಗಳು ಸಿಕ್ಕವು. ಬಂದವರನ್ನು ಧೈರ್ಯವಾಗಿ ಎದುರಿಸುವುದೇ ಕ್ಷೇಮಕರವೆಂದು ದೀಪ ಹಾಕಿ, ರಾಯರು ವಿಶೇಷ ಮುತುವರ್ಜಿ ವಹಿಸಿ ಮಾಡಿಸಿದ ಕಳ್ಳ ಕಿಂಡಿಯಿಂದ ಬಾಗಿಲು ತೆರೆದು "ಯಾರವರು ?" ಎಂದು ಗದರಿಕೊಂಡೆ. "ನಾವು ಆದಾಯಕರ ಇಲಾಖೆಯವರು" ಎಂದು ತಮ್ಮ ಪರಿಚಯ ಪತ್ರವನ್ನು ತಂಡದ ನಾಯಕರು ಮುಂದೆ ಮಾಡಿದರು. ನಡು ರಾತ್ರಿಯ ಈ ದಾಳಿಗಾಗಿ ವಿಸ್ಮಯಪಟ್ಟರೂ ಬಾಗಿಲು ತೆಗೆಯದೇ ಬೇರೆ ಮಾರ್ಗವಿರಲಿಲ್ಲ.

ಒಳಗೆ ಬಂದವರು ನಯವಿನಯ, ವಂದನೆಗಳ ಗೊಂದಲಕ್ಕೆ ಬೀಳದೇ ಇದ್ದ ಆಸನಗಳನ್ನೆಲ್ಲ ಅಲಂಕರಿಸಿದರು. ಮುಖಂಡನು ನೇರ ಮಾತುಕತೆ ಆರಂಭಿಸಿದ. "ನಾವು ಕೇಳಿದ ಪ್ರಶ್ನೆಗಳಿಗೆಲ್ಲ ಸ್ಪಷ್ಟ ಮತ್ತು ಸಂಕ್ಷಿಪ್ತ ಉತ್ತರ ಕೊಡಬೇಕು. ಅರೆ ಸತ್ಯ-ಅಸತ್ಯಗಳಿಂದ ದೂರವಿರಿ ! ಅಡ್ಡ ಕತೆ-ಹರಟೆ ಗಳಿಗೆ ಅವಕಾಶವಿಲ್ಲ. ಅಲ್ಲದೇ ನಿಮ್ಮ ಮನೆಯ ಶೋಧ-ಶುದ್ಧಿಗೆ ಸಂಪೂರ್ಣ ಸಹಕಾರ ನೀಡಬೇಕು. ನಮ್ಮ ಚಟುವಟಿಕೆ ನ್ಯಾಯಬದ್ಧ ವಾಗಿದೆ ಎಂದು ಖಾತ್ರಿಪಡಿಸುವುದಕ್ಕಾಗಿ ಈರ್ವರು ಪ್ರತಿಷ್ಠಿತರನ್ನು ಸಾಕ್ಷಿ ಯಾಗಿ ಕರೆ ತಂದಿದ್ದೇನೆ. ಸಂಪೂರ್ಣ ಸಹಕಾರ ನೀಡಿದರೆ, ನಿಮಗೆ ಯಾವ ತೊಂದರೆಯೂ ಆಗದು" ಎಂದು ಠೀವಿಯಿಂದ ನುಡಿದಾಗ ಉಳಿದವರು ಕೋಲೆ ಬಸವನಂತೆ ತಲೆಹಾಕಿದರು. "ನೀವು ಹೇಳಿದ್ದಕ್ಕೆಲ್ಲ ಒಪ್ಪಿಗೆ. ಆದರೆ ನಾನಿನ್ನೂ ಅರೆನಿದ್ರೆಯಲ್ಲಿದ್ದುದರಿಂದ ಕೊಟ್ಟ ಉತ್ತರಗಳೆಲ್ಲ ಸಮಂಜಸ ವಾಗಿರುತ್ತವೆಂದು ಹೇಳಲಾಗದು....ಆದ್ದರಿಂದ ನನಗೆ ಒಂದು ಲೋಟ, ನಿಮಗೆಲ್ಲ 'ಒನ್ ಬೈ ಟೆನ್' ಕಾಫಿ ಕೊಡುತ್ತೇನೆ, ಸಾರಿ" ಎಂದು ಅವರ

ಒಪ್ಪಿಗೆಗೂ ಕಾಯದೇ ಅಡಿಗೆ ಮನೆಗೆ ಧಾವಿಸಿದೆ. ಬಂದವರೆಲ್ಲ ಮಿಕಿ ಮಿಕಿ ನೋಡುತ್ತ ಕುಳಿತಿರಬೇಕು. "ಹತ್ತು ಜನಕ್ಕೆ ಆಗುವಷ್ಟು ಕಪ್ಪು-ಸಾಸರು ಮನೆಯಲ್ಲಿಲ್ಲದ ಕಾರಣ ಲಭ್ಯವಿದ್ದ ಲೋಟ-ಬಟ್ಟಲು-ವಾಟಿಗಳಲ್ಲಿಯೇ ಕೊಡುತ್ತಿದ್ದೇನೆ. ಈ ಹಿತ್ತಾಳೆಯ ಲೋಟ ತಾತ ನನ್ನ ಹತ್ತನೆಯ ಹುಟ್ಟುಹಬ್ಬಕ್ಕೆ ಕೊಟ್ಟದ್ದು. ಕಂಚಿನ ಈ ಬಟ್ಟಲು ಚಿಕ್ಕಮ್ಮ ತನ್ನ ಮದುವೆಯ ನೆನಪಿಗೆ ಉಡುಗೊರೆ ಇತ್ತದ್ದು, ಈ ಸ್ಟೀಲ್ ಲೋಟ ಅತ್ತೆಯವರು ಚೊಚ್ಚಲ ಮಗುವಿನ ಕೈಯಲ್ಲಿ ಇಟ್ಟದ್ದು...." ಎಂದು ವಿವರಣೆ ಕೊಡುತ್ತ ಎಲ್ಲರಿಗೂ ಕಾಫಿ ಕೊಡುತ್ತಿದ್ದಾಗ, ಮುಖಂಡನು "ತಲೆಹರಟೆ ಬೇಡವೆಂದು ಹೇಳಲಿಲ್ಲವೇ ? ಮಾತುಬೇಡ" ಎಂದು ಜಬರಿಸಿ ತಾನೇ ಮಾತು ನಿಲ್ಲಿಸಿ ಕಾಫಿ ಹೀರತೊಡಗಿದ. ನಂತರ ಸಂಭಾಷಣೆ ಈ ಕೆಳಗಿನಂತೆ ಸಾಗಿತು.

**ಪ್ರಶ್ನೆ** :—ನಿಮ್ಮ ಯಜಮಾನರ ಹೆಸರು ಏನು ?

**ಉತ್ತರ** :—ನಾನು ಹೆಸರೆತ್ತಿ ಕೂಗುವುದಿಲ್ಲ. ಮಿಸ್ಟರ್ ಎಂದೋ, ರಾಯರೇ ಎಂದೇ ಕರೆಯುವುದು ರೂಢಿ. ಪತ್ರ ಬರೆಯುವಾಗ ಹಿಂದೆ ಪ್ರಿಯತಮಾ ಎಂದೂ ಕರೆದದ್ದುಂಟು.

**ಪ್ರಶ್ನೆ** :—ಶಾಲೆ-ಕಾಲೇಜುಗಳಲ್ಲಿ ಬಳಸುವ ಹೆಸರು ಹೇಳಿದರೆ ಸಾಕು.

**ಉತ್ತರ** :—ಸಹಪಾಠಿಗಳೆಲ್ಲ 'ಕೆ.ಎಲ್.' ಎಂದೇ ಕೂಗುತ್ತಾರೆ ನೋಡಿ. 'ಕಾಮತ್' ಹೆಸರು ಕಿಕ್ಕಿರಿದು ತುಂಬಿದ ಊರಿನಲ್ಲಿ ಅದೇ ರೂಢಿ. ಶಾಲೆ ಹಾಜರಿಯಲ್ಲಿ 'ಕೆ.ಎಲ್. ಕಾಮತ್' ಎಂದಿತ್ತು. ಅಮೇರಿಕೆಯಲ್ಲಿ ಪ್ರಾಧ್ಯಾಪಕರೆಲ್ಲ 'ಕ್ರಿಶ್' ಎಂದೇ ಕರೆಯುತ್ತಿದ್ದರಂತೆ.

**ಪ್ರಶ್ನೆ** :—ಹೆಸರಿನ ಹಿಂದೆ ಡಾಕ್ಟರ್ ಎಂದು ಸೇರಿಸಲಾಗಿದೆ. ಅವರೇನು ದನದ ಡಾಕ್ಟರೇ ?

**ಉತ್ತರ** :—ಆದಿದ್ದರೆ ಎಷ್ಟೋ ವಾಸಿ ಇತ್ತು ! ತಿಗಣೆ, ಜಿರಲೆಗಳ ಡಾಕ್ಟರ್ ಎಂದು ಕರೆದುಕೊಳ್ಳುತ್ತಾರೆ ವ್ಯಾಕ್ !

**ಪ್ರಶ್ನೆ** :—ಅವರ ವೃತ್ತಿ ಯಾವುದು ? ಏನ್ ಕೆಲ್ಸಾ ಮಾಡ್ತಾರೆ ?

**ಉತ್ತರ** :—ಸದಾ ಒಂದೇ ಕೆಲಸ ಮಾಡುವುದರಲ್ಲಿ ವಿಶ್ವಾಸವಿಟ್ಟವರಲ್ಲ ! ಒಮ್ಮೊಮ್ಮೆ ಈರುಳ್ಳಿ ಹೆಚ್ಚಿಕೊಡ್ತಾರೆ. ಇನ್ನೊಮ್ಮೆ ನಾಸು ಒಗೆದ ಬಟ್ಟೆ ಒಣ ಹಾಕ್ತಾರೆ. ಕ್ಯಾಮರಾದಲ್ಲಿ ಫಿಲ್ಮ್ ಇದ್ದರೆ ಫೋಟೊ ತೆಗೀತಾರೆ. ನನ್ನ ಕೆಲವು ಕಲರ್ ಫೋಟೋ ತೆಗೆದಿದ್ದಾರೆ. ಆಲ್ಬಮ್ ತೋರಿಸ್ಲಾ ?

**ಪ್ರಶ್ನೆ** :—ಹಾಗಾದರೆ ಊಟ-ಉಪಚಾರಕ್ಕೆ ಏನು ಮಾಡ್ತೀರಾ ?

**ಉತ್ತರ** :—ನಾವು ಮೀನು-ಮಾಂಸಕ್ಕೆ ಮನಸೋತವರಲ್ಲ. ಎಣ್ಣೆ-ಬೆಣ್ಣೆಗಳ ಪ್ರಿಯರಲ್ಲ. ಊಟಕ್ಕೆ ಚಪಾತಿ, ಮೂಲಂಗಿ, ಸೌತೇಕಾಯಿ-ಕೋಸು ತಿಂತೀವೆ !

**ಪ್ರಶ್ನೆ** :—(ಅಸಹನೆಯಿಂದ) ಛೇ ಛೇ, ನಾವು ಕೇಳ್ತಿರೋದು ಪ್ರತಿ ತಿಂಗಳ ಖರ್ಚಿಗೆ, ವಸ್ತ್ರ-ಒಡವೆ ಖರ್ಚಿಗೆ ಹಣ ಎಲ್ಲಿಂದ ಬರುತ್ತದೆ ? ಮಿಕ್ಸಿ-ಫ್ರಿಜ್-ಕಾರುಗಳಿಗೆಲ್ಲ ?

**ಉತ್ತರ** :—ಓ ! ಅದಕ್ಕಾಗಿ ಇಷ್ಟೆಲ್ಲಾ ತಲೆ ಕೆಡಿಸಿಕೊಂಡಿರಾ ? ಅರೆಯುವ ಕಲ್ಲೇ ನಮ್ಮ ಮಿಕ್ಸಿ, ಒಂದು ರೂಪಾಯಿ ಕೊಟ್ಟು ತಂದ ಮಡಕೆಯೇ ನಮ್ಮ ಫ್ರಿಜ್. ನಮ್ಮದು ಪೆಟ್ರೋಲ್ ಇಲ್ಲದೆಯೇ ಓಡುವ ಕಾರು ನೋಡಿ ! ಅಂದರೆ ನಮ್ಮ ನಾಲ್ಕು ಕಾಲೇ ಎರಡು ಜೋಡಿ ವಾಹನಗಳು. ಅಂಥ ಅವಶ್ಯಕತೆ ಬಿದ್ದಾಗ ಬಸ್....

**ಸಹಾಯಕ** :—ಸಾಹೇಬರೇ ! ಈ ಅಮ್ಮ ತಮ್ಮನ್ನು ಹಾಸ್ಯ ಮಾಡುತ್ತಿದ್ದಾರೆ. ಸಮಯ ಹಾಳು ಮಾಡದೇ ಕೆಲಸ ಪ್ರಾರಂಭಿಸಬಹುದಲ್ಲವೇ ?

**ಮುಖ್ಯಸ್ಥ** :—ಹೌದು, ಹೌದು ನಿಮ್ಮ ಮನೆಯಲ್ಲಿ ಅಡಗಿಸಿಟ್ಟ ಸಂಪತ್ತಿನ ಶೋಧವಾಗಬೇಕಾಗಿದೆ. ದೇವರ ಮನೆ ಎಲ್ಲಿದೆಯಮ್ಮ ?

**ಉತ್ತರ** :—ನಟ-ನಟಿಯರಂತೆ ದೇವರ ಕೋಣೆಯಲ್ಲಿ ಬೆಳ್ಳಿ-ಬಂಗಾರ ಹುದುಗಿಸಿಟ್ಟು ದೇವರನ್ನೇ ಕಾವಲುಗಾರನಾಗಿ ನೇಮಿಸುವ ವರ್ಗಕ್ಕೆ ಸೇರಿದವರು ನಾವಲ್ಲ. ನಮ್ಮ ಮನೆಯಲ್ಲಿ ಪೂಜಾಸ್ಥಾನವೇ ಇಲ್ಲ. ಅಷ್ಟೇ ಅಲ್ಲ, ದೇವರ ಪಟ ಕೂಡ ತೂಗುಹಾಕಿಲ್ಲ. ಆ ಕರುಣಾಮಯನ ಕೃಪಾ ಕಟಾಕ್ಷ ಸದಾಕಾಲ ನಮ್ಮ ಮೇಲಿರುವಾಗ, ನಾವೇಕೆ ಪಟ-ವಿಗ್ರಹಗಳ ಪೂಜೆ-ನೈವೇದ್ಯಗಳಿಗೆ ಶರಣು ಹೋಗಬೇಕು ?

**ಮುಖ್ಯಸ್ಥ** :—ಯಾವ ಯಾವ ಬ್ಯಾಂಕ್‌ಗಳಲ್ಲಿ ನಿಮ್ಮ ಲಾಕರು ಗಳಿವೆ ಮ್ಯಾಡಂ ?

**ಉತ್ತರ** :—ಮನೆಯಲ್ಲಿದ್ದ ಬೀರುಗಳಿಗೇ ಲಾಕ್ ಹಾಕದೇ ಇರು ವಾಗ, ಲಾಕರುಗಳ ಗೊಡವೆ ನಮಗೇಕೆ ?

**ಮುಖ್ಯಸ್ಥ** :—ಈ ತಪಾಸಣಾ ಅಧಿಕಾರಿಗಳು ನಿಮ್ಮ ವಾಸಸ್ಥಾನವನ್ನು ಸೂಕ್ಷ್ಮವಾಗಿ ಪರಿಶೀಲಿಸಲಿದ್ದಾರೆ. ಆದ್ದರಿಂದ ನಿಮ್ಮ ಸಾಮಾನುಗಳು ನಾಪತ್ತೆಯಾಗದಂತೆ ಅವರ ಜೊತೆಗೇ ಇರಿ.

**ಉತ್ತರ** :—ಅಂಥ ಹೆದರಿಕೆ ನನಗಿಲ್ಲ. ಅವರು ಯಾವುದನ್ನೂ ಹಾಳು ಮಾಡದೇ ಕೂಲಂಕುಷ ಶೋಧಮಾಡಲು ಸ್ವತಂತ್ರರು.

ತಂಡ ವಿದ್ಯುದ್ವೇಗದಿಂದ ಕೆಲಸ ಪ್ರಾರಂಭಿಸಿತು. ಬೆಡ್ ರೂಂ, ಅಡಿಗೆ ಮನೆ ಮುಗಿಸಿ ಬಚ್ಚಲು ಮನೆಗೆ ನುಗ್ಗಿದ ಅಧಿಕಾರಿ, ಉದ್ವೇಗದಿಂದ "ಸಾರ್, ಸಾರ್, ಇಲ್ಲಿ ಕೆಲವು ಹಳೇ ಹೆಂಚುಗಳನ್ನು ತೆಗೆದು ಹೊಸ ಹೆಂಚು ಗಳನ್ನು ಜೋಡಿಸಿದ್ದು ತುಂಬ ಸ್ಪಷ್ಟವಾಗಿದೆ !" ಎಂದು ಕೂಗಿದ. ಮುಖ್ಯಸ್ಥರು ಅಲ್ಲಿಗೆ ಧಾವಿಸಿ ವಿವರಣೆ ಕೊಡುವಂತೆ ಆದೇಶವಿತ್ತರು.

**ನಾನು** :—ಕಟ್ಟಡದ ಮೂಲ ಕಂಟ್ರ್ಯಾಕ್ಟರರು ದಕ್ಷತೆ ವಹಿಸದೇ ಇದ್ದುದರಿಂದ ಒಂದೊಂದೆ ಹೆಂಚು ಕಿತ್ತು ಬರಲಾರಂಭಿಸಿದ್ದವು. ಹೀಗಾಗಿ ಬಾತ್‌ರೂಂನ ಬಲಗಡೆ ಭಾಗ ಹೆಂಚು ಕಳೆದುಕೊಂಡು ಅಸಹ್ಯವಾಗಿ

ನಿಂತಿತ್ತು. ಯಾರೋ ಗಾರೆಯುವನನ್ನು ಹಿಡಿದುತಂದು ಸರಿಪಡಿಸಲು ಯತ್ನಿಸಿದಾಗ, ಅವನು ಸಾವಿರಾರು ರೂಪಾಯಿ ಮೊಬಲಗು ಮುಂದಿಟ್ಟ. ಅವನನ್ನು ಕಳಿಸಿ ತಾನೇ ಆ ಕೆಲಸವನ್ನು ನಮ್ಮ ರಾಯರು ವಹಿಸಿಕೊಂಡು, ಮಾದರಿಯ ಟೈಲ್‌ದೊಂದಿಗೆ ಜೆ.ಸಿ. ರೋಡಿಗೆ ಹೋದಾಗ, ಅಂಗಡಿಯುವನು 'ಇಂಥ ಟೈಲ್ಸ ಮಾಡೋದನ್ನ ನಿಲ್ಸಿ ಯಾವ ಕಾಲ ಆಯ್ತೋ!' ಎಂದು ಹೇಳಿ ಬದಲಿಗೆ ಕೊಂಚ ಬೇರೆ ಡಿಝೈನ್ ಇರುವವನ್ನು ಕಡಿಮೆ ದರದಲ್ಲಿ ಕೊಟ್ಟ. ಜೊತೆಗೆ ಒಂದು ಕಿಲೋಗ್ರಾಂ ಬಿಳೀ ಸಿಮೆಂಟ್ ತಂದು ಸ್ವತಃ ಕೂಡ್ರಿಸಿದ್ದಾರೆ. ಈ ಕೆಲಸಕ್ಕೆ ಅವರು ಖರ್ಚು ಮಾಡಿದ್ದು ಕೇವಲ ನೂರು ರೂಪಾಯಿ ಮಾತ್ರ !

ಮುಖ್ಯಸ್ಥರಿಗೆ ಈ ವಿವರಣೆಯಿಂದ ತೃಪ್ತಿಯಾದಂತೆ ಅನಿಸಲಿಲ್ಲ. "ಒಳಗೆ ಪೊಳ್ಳು ಇದ್ದು ಸದ್ದು ಬರುತ್ತದೆಯೋ ನೋಡಯ್ಯಾ !" ಅಪ್ಪಣೆ ಕೊಡುತ್ತಿದ್ದಂತೆ, ಸಹಾಯಕನು ತೋರುಬೆರಳು ಅದಕ್ಕೆ ತಗುಲಿಸಿದೊಡನೆ ಇಡೀ ಹಂಚಿನ ಸಾಲೇ ನೆಲಕ್ಕುರುಳಿತು. ಒಳಗೆ ಗಟ್ಟಿ ಗೋಡೆ ಗಹಗಹಿಸಿತು. ಹೆಂಚು ಬಿದ್ದ ಸಪ್ಪಳ ಜೋರಾಗಿದ್ದರಿಂದ ಈ ಅನಾಹುತಕ್ಕೆ ಕಾರಣರಾದವರಂತೆ ಕಕ್ಕಾವಿಕ್ಕಿಯಾಗಿ ತಂಡದವರು ನಿಂತಾಗ, ನಾನು "ಗಾಬರಿಯಾಗಬೇಡಿ, ಕಾಡಿನಿಂದ ಹಿಂದಿರುಗಿದ ಕಾಮತರು ಮತ್ತೆ ರಿಪೇರಿ ಮಾಡುತ್ತಾರೆ. ಓ, ನಿಮಗೆ ಒಡೆದ ಹೆಂಚು ತಗಲಿ ರಕ್ತ ಸುರೀತಾ ಇದೆ. ಇಕಾ, ಡೆಟ್ಟಾಲಿನಿಂದ ತೊಳೆದುಕೊಳ್ಳಿ. ನಂತರ ಈ ಬ್ಯಾಂಡ್‌ಏಡ್ ಪಟ್ಟಿ ಹಚ್ಚಿಕೊಳ್ಳಿ !" ಎಂದಾಗ ತಂಡದವರಿಗೆಲ್ಲ ವಿಪರೀತ ಸಂಕೋಚವಾಗಿ, ಅಳುಕುತ್ತಲೇ ಗಾಯಕ್ಕೆ ಚಿಕಿತ್ಸೆ ಮಾಡಿದರು. ಮುಖ್ಯಸ್ಥರು ಕೊಂಚ ಮೆತ್ತಗಾಗಿ, "ನಿಮ್ಮ ಮನೆಯನ್ನು ಒಡೆದು, ಕೊರೆದು ಹಾಳು ಮಾಡುವ ಮನಸ್ಸು ನಮಗಾರಿಗೂ ಇಲ್ಲ. ನಿಮ್ಮ ಗಳಿಕೆಯ ಹಣವನ್ನೆಲ್ಲ ಎಲ್ಲಿ ಇಡುತ್ತೀರಿ ಎಂದು ಯಾವ ಮುಚ್ಚುಮರೆ ಇಲ್ಲದೇ ಹೇಳಿ" ಎಂದರು, ವಿನಂತಿಸುವ ಧ್ವನಿಯಲ್ಲಿ.

ನಾನೆಂದೆ, "ನಮ್ಮಲ್ಲಿ ಗಳಿಕೆಯೆಂಬ ಗುಟ್ಟು ಇಲ್ಲವೇ ಇಲ್ಲ. ಎಲ್ಲಾ ಖುಲ್ಲಂ ಖುಲ್ಲಾ. 27 ವರ್ಷದ ವೈವಾಹಿಕ ಜೀವನದಲ್ಲಿ ಇವರ ಜೇಬು ಖಾಲಿಯಿದ್ದ ಒಂದು ದಿನ ಕೂಡ ನೆನಪಿಲ್ಲ. ಒಂದೇ ದಿನ ನಸುಕಿನ

ತಿರುಗಾಟಕ್ಕೆ ಹೋದಾಗ ಹಳ್ಳಿಯುವನೊಬ್ಬ "ಸ್ವಾಮಿ ಕಾಫಿಗೆ ಕಾಸಿಲ್ಲ. ಈ ಕನಕಾಂಬರ ಹೂ ಕೊಂಡು ನೆರವಾಗಿರಿ", ಎಂದು ಅಂಗಲಾಚಿದ. ಇವರು ತಕ್ಷಣ ಜೇಬಿನಿಂದ 2 ರೂಪಾಯಿ ಕೊಟ್ಟು ಅವನು ಕೊಟ್ಟಷ್ಟು ಹೂ ಮನೆಗೆ ತರಬೇಕೆ ? ಮೊನ್ನೆ ಇನ್ನೊಂದು ತಮಾಷೆಯಾಯಿತು. ಸಂಜೆಗೆ ಸ್ಯಾಂಕಿ ಕೆರೆಯ ಬಳಿ ಅಲೆದಾಡಲು ಹೊರಟಿದ್ದೆವು. ದಾರಿಯಲ್ಲಿ ಹಣ್ಣು ಮುದುಕಿ ಭಿಕ್ಷೆ ಬೇಡುತ್ತಿದ್ದಳು. 'ಜೇಬಿನಲ್ಲಿ ಕಾಸಿದ್ದರೆ ಮುದುಕಿಗೆ ಕೊಡಿ' ಎಂದು ಮಾತು ಮುಗಿಸುವ ಮೊದಲೇ ಅವಳ ಕೈಯಲ್ಲಿ ಐವತ್ತು ಪೈಸೆ ಹಾಕಿದ್ದರು. ಅವರ ಗಳಿಕೆಯ ಹಣ ಯಾವಾಗಲೂ ಅವರ ಜೇಬಿನಲ್ಲಿರುತ್ತದೆ !"

**ಪ್ರಶ್ನೆ:**—ದಯವಿಟ್ಟು ಯಾವ ಬ್ಯಾಂಕಿನಲ್ಲಿ ಹಣ ಇಡುತ್ತೀರಿ ಎಂದು ಹೇಳಬಾರದೇ ?

**ನಾನು:**—ರಾಯರಿಗೆ ಬ್ಯಾಂಕ್ ವ್ಯವಹಾರವೆಂದರೆ ತುಂಬ ಪ್ರೀತಿ ! ಅಂತೆಯೇ ಮನೆಯಿಂದ ಕಾಲುನಡಿಗೆಯಲ್ಲಿ ಮುಟ್ಟಬಹುದಾದಂಥ ವಿವಿಧ ಬ್ಯಾಂಕುಗಳ ಶಾಖೆಗಳಲ್ಲಿ ಖಾತೆ ತೆಗೆದಿದ್ದಾರೆ. ಹತ್ತು ರೂಪಾಯಿಗೆ ಒಂದು ಖಾತೆ ತೆರೆಯಬಹುದಾಗಿದ್ದರೂ ಇವರಿಗೆ ಚೆಕ್ ಪುಸ್ತಕ ಒಟ್ಟು ಮಾಡುವುದು ಸೇರುತ್ತದೆ. ಹಿಂದೆ ಕನಿಷ್ಟ ನೂರು ರೂಪಾಯಿ ಠೇವಣಿ ಇಟ್ಟರೆ ಸಾಕಿತ್ತು. ಈಗ ಇದನ್ನು ಇನ್ನೂರಾ ಐವತ್ತಕ್ಕೆ ಏರಿಸಿದ್ದರಿಂದ, ಇದ್ದಬದ್ದ ಹಣ ಠೇವಣಿ ನುಂಗಿಬಿಟ್ಟಿದೆ !

**ಪ್ರಶ್ನೆ:**—(ಸಂತೋಷದಿಂದ) ನೀವು ಸತ್ಯವನ್ನು ಕೊನೆಗೊಮ್ಮೆ ಹೊರಗೆಡವಿದ್ದರಿಂದ ತುಂಬಾ ಸಂತೋಷವಾಗಿದೆ. ನಿಮಗೆ ತೊಂದರೆ ಯಾಗದಿದ್ದರೆ, ನಿಮ್ಮವರ ಎಲ್ಲಾ ಪಾಸ್‌ಬುಕ್, ಚೆಕ್ ಬುಕ್‌ಗಳನ್ನು ತೋರಿಸುವ ಕೃಪೆ ಮಾಡುವಿರಾ ?

**ನಾನು:**—ಅದಕ್ಕೇನಂತೆ ? ತಾನು ಊರಲ್ಲಿಲ್ಲದಾಗ, ನನಗೆ ತೊಂದರೆಯಾಗಕೂಡದು ಎಂದು ಒಂದು ರಟ್ಟಿನ ಪೆಟ್ಟಿಗೆಯಲ್ಲಿ ಕೂಡಲೇ ಸಿಗುವಂತೆ ಇಟ್ಟಿದ್ದಾರೆ. ಆದರೆ ಹೋದ ತಿಂಗಳೂ ಇವರು ಕಾಡು ಎಮ್ಮೆಗಳ ಛಾಯಾಗ್ರಹಣಕ್ಕೆ ಹೋದಾಗ ಈ ಚೆಕ್ ಪುಸ್ತಕಗಳೊಂದಿಗೆ ವಿವಿಧ

ಬ್ಯಾಂಕುಗಳಿಗೆ ಓಡಾಡಿದರೂ, ಇವರ ಖಾತೆಯಲ್ಲಿ ಕನಿಷ್ಟ ಮೊತ್ತ ಇರುವುದರಿಂದ ಒಂದು ಪೈಸಾ ಕೊಡುವುದಿಲ್ಲ ಎಂದು ಕಡ್ಡಿ ಮುರಿದಂತೆ ಹೇಳಿ ಬಿಟ್ಟರು. ಆದರೆ ಸುದೈವದಿಂದ ಆಗಾಗ ಇವರ ಬಟ್ಟೆಗಳನ್ನು ಕೊಡವಿ, ಒಗೆಯುವ ಮೊದಲು ಶೋಧಿಸಿದಾಗ ಸಿಗುವ ಕಾಸು ನನಗೆ ಬೇಕಾದಷ್ಟು ಇತ್ತು. ಏನೇನೂ ತೊಂದರೆಯಾಗಲಿಲ್ಲ.

ಎದ್ದು ಆ ರಟ್ಟಿನ ಪೆಟ್ಟಿಗೆ ಮುಖ್ಯಸ್ಥರ ಎದುರಿಗಿಟ್ಟೆ. ಎಲ್ಲರ ಕಣ್ಣು ಗಳೂ ಪಿಕಿ ಪಿಕಿ ನೋಡಲಾರಂಭಿಸಿದವು. ಮೊದಲ ಪಾಸ್‌ಬುಕ್ ಎತ್ತಿ ಕೊಂಡ ಮುಖ್ಯಸ್ಥರು ಅದರ ಮೇಲೆ ನಮೂದಿಸಿದ ಹೆಸರನ್ನು ಓದಿ ದಿಗ್ಭ್ರಮೆ ಗೊಂಡರು. "ಏನ್ರಿ ? ಇದು ಡಾಕ್ಟರ್ ಕೃಷ್ಣಾನಂದ ಕಾಮತರ ಮನೇನಾ ?

**ನಾನು**:— ಮತ್ತೆ ? ನಾನು ಅಂಥಿಂಥವರನ್ನು ಮದುವೆಯಾಗ್ತೀನಿ ಎಂದು ತಿಳಿದಿರಾ ?

**ಮುಖ್ಯಸ್ಥ**:—ನೀವು ಜ್ಯೋತ್ನಾ ಕಾಮತರೇ ! ಆಕಾಶವಾಣಿಯ ಡೈರೆಕ್ಟರ್. ಡಾ| ಕಾಮತರು ನಿಮಗೆ ಸಂಬಂಧಿಯೇ ?

**ನಾನು**:—ಹೌದುರೀ ! ನನಗೆ ಮದುವೆಯ ಮೊದಲು ಡಾಕ್ಟರೇಟ್ ಇರಲಿಲ್ಲ. ಆದರೆ ಅದಿಲ್ಲದಿರುವುದು ರಾಯರಿಗೆ ಅವಮಾನಕಾರಿ ಎಂದು ನಾನು ಪಿ.ಎಚ್.ಡಿ. ಮುಗಿಸಬೇಕಾಯ್ತು ! ಆಕಾಶವಾಣಿ ಕೇಂದ್ರದ ನಿರ್ದೇಶಕಿ ನಾನೇ ಎಂದರೆ ನಂಬುತ್ತೀರಷ್ಟೇ ?

ಅದೇನೋ ಅನಾಹುತ ಆದಂತೆ ತಂಡದವರೆಲ್ಲ ಗರಬಡಿದವರಂತೆ ಎದ್ದು ನಿಂತು, ಪಶ್ಚಾತ್ತಾಪದ ದನಿಯಲ್ಲಿ ಮುಖ್ಯಸ್ಥರು "ಪ್ರಮಾದವಾಯಿತು, ತಾಯಿ ಕ್ಷಮಿಸಬೇಕು. ಕಾವಲುಗಾರನ ಮಾತು ನಂಬಿದ್ದೆ ಮುಳವಾಯಿತು. ಕಮಿಶನರ ಸಾಹೇಬರು ನಾವು ಹಲ್ಲೆ ಮಾಡಬೇಕಾದವರ ವಿಳಾಸ ಕೊಟ್ಟು ಅದೇ ಕಟ್ಟಡದಲ್ಲಿ ಆಕಾಶವಾಣಿಯ ನಿರ್ದೇಶಕರೂ ವಾಸವಾಗಿದ್ದಾರೆ, ಅವಶ್ಯ ಅನಿಸಿದರೆ ಅವರ ನೆರವು ಪಡೆಯಬಹುದು ಎಂದು ಸೂಚಿಸಿದ್ದರು. ಈ ಬೃಹತ್

ಕಟ್ಟಡದಲ್ಲಿ ವಿಳಾಸ ಹುಡುಕುವುದು ಕಷ್ಟಕರವೆಂದು ಕಾವಲುಗಾರನಿಗೆ ವಿಚಾರಿಸಿದೆವು. ಅವನು ತನಗೆ ತಿಳಿಯದೇ ಇದ್ದದ್ದು ಏನೂ ಇಲ್ಲ ಎಂಬಂತೆ ನಿಮ್ಮ ಮನೆ ತೋರಿಸಬೇಕೇ ? ಅವನಿಗೆ ಚೆನ್ನಾಗಿ ಥಳಿಸಿದಾಗಲೇ ತಾನು ಮಾಡಿದ ಅಪರಾಧದ ಅರಿವಾಗಬೇಕು. ತಾವು ನಮ್ಮ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಕಮಿಶನರ್ ಸಾಹೇಬರಿಗೆ ದೂರು ಕೊಡಬೇಡಿ !" ಎಂದು ಅಂಗಲಾಚಿ ಬೇಡಿಕೊಂಡರು.

"ನೀವು ಹೇಳುವುದನ್ನು ಒಪ್ಪಿಕೊಳ್ಳುವ ಪೂರ್ವದಲ್ಲಿ ನನ್ನ ಸೂಚನೆಗಳಿಗೆ ನಿಮ್ಮ ಸಮ್ಮತಿ ಅತ್ಯವಶ್ಯ. ಈ ಚಳಿಗಾಲದ ರಾತ್ರಿಯಲ್ಲಿ ನೀವೆಲ್ಲ ವಿಪರೀತ ದಣಿದಿದ್ದರಿಂದ ನಾನು ಕೊಡುವ ಅಲ್ಪೋಪಹಾರವನ್ನು ಸೇವಿಸಬೇಕು. ಅಲ್ಲದೇ, ಆ ಬಡಪಾಯಿ ಕಾವಲುಗಾರನನ್ನು ಕ್ಷಮಿಸಿ, ಕಾಫಿ ತಿಂಡಿಗಾಗಿ ಇಲ್ಲಿಗೆ ಬರಮಾಡಿಕೊಳ್ಳಬೇಕು" ಎಂದಾಗ "ತಾವು ತೋರಿಸುವ ಮಾತೃ ಹೃದಯದ ದೊಡ್ಡಸ್ತಿಕೆ ಹೇಗೆ ತಳ್ಳಿ ಹಾಕುವುದು ?" ಎಂದರು, ಆದಾಯಕರ ಇಲಾಖೆಯ ನೊಕಾದ್‌ಮರು. ಅಗಂತುಕರೂ ಕಾವಲುಗಾರನೊಂದಿಗೆ ನಾಶ್ತಾ ಸ್ವೀಕರಿಸುವುದನ್ನು ಕಂಡಾಗ ಇನ್ನೂ ಮಾನವೀಯತೆ ಬದುಕಿಕೊಂಡಿದೆ ಎಂದು ನೆಮ್ಮದಿಯಾಯಿತು.



# ಜೀವಂತ ಗಡಿಯಾರ



ಹೊನ್ನಾವರ ಎಂಬ ಹಿರಿಯ ಹಳ್ಳಿಯಲ್ಲಿ ವೇಳೆಯನ್ನು ಅರಿಯಲು ಹುಂಜದ ಕರೆಯನ್ನು ಅವಲಂಬಿಸಿರುವಷ್ಟು ಹೆಡ್ಡರಲ್ಲ ಅಲ್ಲಿಯ ಜನ. ಅದು ಪುರಾತನ ಪದ್ಧತಿ ಎಂದು ಅಲ್ಲಿಯ ಚರ್ಚಿನ ಬೃಹತ್ ಗಂಟೆಗೆ ಶರಣು ಹೋಗಿದ್ದರು. "ಢಣ್ ಢಣ್ ಢಣಾ, ಢಣ್ ಢಣ್ ಢಣಾ" ಎಂದು ಮುಂಜಾವಿನ ಐದು ಗಂಟೆಗೆ, ನಡು ಮಧ್ಯಾಹ್ನ ಮತ್ತು ಸಂಜೆ ಆರು ಗಂಟೆಗೆ ಅದು ಬಡಿದುಕೊಳ್ಳುತ್ತಿದ್ದರಿಂದ ಅದಕ್ಕನುಗುಣವಾಗಿ ಊರಿನ ದಿನಚರಿ ರೂಪುಗೊಂಡಿತ್ತು. ನಸುಕಿನ ಕರೆಗೆ ಗೃಹಿಣಿಯರು ಎದ್ದು ಬಚ್ಚಲೊಲೆಗೆ ಕಿಚ್ಚು ಒಟ್ಟಿ ಹಿರಿ-ಕಿರಿಯರನ್ನು ಎಬ್ಬಿಸಿ ತಿಂಡಿ-ಕಷಾಯ ಮಾಡಿ ಪೂರೈಸುವಲ್ಲಿ ಮೈಮರೆಯುತ್ತಿದ್ದರು. ನಡುದಿನದ ಗಂಟೆ ಅಡಿಗೆ ಮುಗಿಸಲು

ಎಚ್ಚರಿಸುತ್ತಿತ್ತು. ಆದರಂತೆ ಸಂಜೆಯು ಗಂಟೆ ಹೊಡೆದುಕೊಳ್ಳಲಾರಂಭಿಸಿದಾಗ, ಮತ್ತೆ ಅಡಿಗೆ ಪ್ರಾರಂಭಿಸಿದರೆ, ದೀಪ ಉರಿಸಲು ಹೆಚ್ಚು ಹೊನ್ನೆಣ್ಣೆ ಬೇಕಿಲ್ಲವೆಂದು ಗೃಹಿಣಿಯರ ಲೆಕ್ಕಾಚಾರ. ರಾತ್ರಿ ಎಂಟು ಗಂಟೆಯ ನಂತರ ಹೊಸಬರು ಊರಿಗೆ ಬಂದರೆ, ಕಗ್ಗತ್ತಲು ಮತ್ತು ಬೀದಿ ನಾಯಿಗಳು ಅವರನ್ನು ಸ್ವಾಗತಿಸುತ್ತಿದ್ದವು.

ಊರಿನ ಪುರುಷ ವಿದ್ಯಾರ್ಥಿಗಳು ಕಸಬಾ ಗಂಡು ಹುಡುಗರ ಶಾಲೆಗೆ ಹೋಗುವದು ರೂಢಿ. ಉಳಿದ ಚಿಕ್ಕವರನ್ನೆಲ್ಲ ಅಣ್ಣ-ಅಕ್ಕಂದಿರು ಜಬರಿಸಿ ಶಾಲೆಗೆ ಮುಟ್ಟಿಸುವಂತಾದರೆ ಹಿರೇಮಣಿಯೆಂದು ಮೆರೆಯುತ್ತಿದ್ದ ನಮ್ಮ ರಾಯರಿಗೆ ನಾಶ್ತ ಕೂಡ ಮಾಡದೇ ಶಾಲೆಗೆ ಓಡುವ ಹಂಬಲ. ಏಕೆ ಗೊತ್ತೆ ? ಸಕಲ ವಿದ್ಯಾರ್ಥಿಗಳ ಚಟುವಟಿಕೆಗಳನ್ನು ನಿಯಂತ್ರಿಸುವ ಗಂಟೆ ಬಾರಿಸುವ ಅವಕಾಶ ಕಳೆದುಕೊಳ್ಳಬಾರದೆಂದು ! ಶಾಲೆಯಲ್ಲಿ ಹೆಸರಿಗೇನೋ ಒಂದು ಗೋಡೆ ಗಡಿಯಾರವಿತ್ತು. ಆದರೆ ಅದರ ಜೀವಕಳೆ ಹಾರಿಹೋಗಿ ಒಂದು ದಶಕವೇ ಕಳೆದಿದ್ದರಿಂದ, ದೂಳು ಉಂಡು ಸುಖವಾಗಿ, ಶಾಶ್ವತವಾಗಿ ನಿದ್ರಿಸುತ್ತಿತ್ತು. ಅಂತೆಯೇ ಹೆಡ್‌ಮಾಸ್ತರಗರ ಕೋಟಿನ ಜೇಬಿನಲ್ಲಿರುವ ಗಾಂಧೀ-ಗಡಿಯಾರವೇ ಶಾಲೆಯ ಸಕಲ ಚಟುವಟಿಕೆಗಳನ್ನು ನಿಯಂತ್ರಿಸುತ್ತಿತ್ತು. ಅವರು ಶಾಲೆಗೆ ಬಂದಾಗ ಮೊದಲ ಗಂಟೆ, ತರಕಾರಿ ತರಲು ಹೋದಾಗ ಎರಡನೇ ಗಂಟೆ, ಚಹಾಕ್ಕೆ ಹೊರಟಾಗ ಮೂರನೆಯ ಗಂಟೆ, ಮನೆಗೆ ಹೊರಟಾಗ ನಾಲ್ಕನೆಯ ಗಂಟೆ. ಎರಡು ಗಂಟೆ ನಾದದ ನಡುವೆ ಕಾಲಾವಧಿ ಇಂತಿಷ್ಟೇ ಇರಬೇಕು ಎಂಬ ನಿರ್ಬಂಧವೇನೂ ಇರಲಿಲ್ಲ. ಅದು ಮೂವತ್ತು ನಿಮಿಷಗಳಿಂದ ಎರಡು ತಾಸಿನವರೆಗೆ ಹಿಗ್ಗಬಹುದಾಗಿತ್ತು. ಒಮ್ಮೆ ಹೆಡ್ ಮಾಸ್ತರರು ರಾಯರ ಪಿತರನ್ನು ಭೇಟಿ ಮಾಡಿದಾಗ, "ನಿಮ್ಮ ಮಗನನ್ನು ಶಾಲೆಯ ಮುಖ್ಯ ಮಾಣಿ ಮಾಡಿ ಗಂಟೆ ಬಡಿಯುವ ಕಾಯಂ ಜವಾಬ್ದಾರಿ ಕೊಟ್ಟಿದ್ದೇನೆ" ಎಂದು ಸಾರಿದಾಗ ರಾಯರ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ.

ಮಾಧ್ಯಮಿಕ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ವಿಜ್ಞಾನ-ವಿದ್ಯಾರ್ಥಿಯಾಗಿಯೂ ಕೈಗಡಿಯಾರ ಇಲ್ಲದೇ ಸಕಲವನ್ನೂ ಸುಸೂತ್ರವಾಗಿ

ಹೇಗೆ ನಡೆಯಿಸಿಕೊಂಡರೋ ದೇವರಿಗೇ ಗೊತ್ತು. ಕಲಿತ ಕಾಲೇಜಿನಲ್ಲಿಯೇ ಕರೆದು ನೌಕರಿ ಕೊಟ್ಟಾಗ ಪ್ರಪ್ರಥಮ ಸಂಬಳದಿಂದ ಕೈಗಡಿಯಾರ ಒಂದನ್ನು ಕೊಳ್ಳುವ ಔದಾರ್ಯ ತೋರಿಸಿದರು ! ಖ್ಯಾತ ಸ್ವಿಸ್ ಫೆವ್ರಲೂಬ ಕಂಪನಿಯ ಸುವರ್ಣಲೇಪದ "ಕಡಲ ರಾಣಿ" ಗಡಿಯಾರವನ್ನು ಮುಂಗೈಗೆ ಕಟ್ಟಿಕೊಂಡಾಗ, ಕೈತುಂಬ ಆಭರಣಗಳನ್ನು ತೊಟ್ಟ ನವವಧುವಿನ ಉತ್ಸಾಹ ಅವರದಾಗಿತ್ತು ! ಐದು ನಿಮಿಷಕ್ಕೊಮ್ಮೆ ಅದರ ಗಾಜನ್ನು ಒರಿಸಲು ಮಖ-ಮಲ್ಲಿನ ಕರವಸ್ತ್ರ ಸದಾಕಾಲ ಜೇಬಿನಲ್ಲಿರಬೇಕು. ಪ್ರತಿ ರಾತ್ರಿಯೂ ಸರಿಯಾಗಿ ಹತ್ತು ಗಂಟೆಗೆ, ಇಪ್ಪತ್ತೆರಡು ಸಲ ಕಿವಿ ತಿರುವಿ ಕೀಲಿ ಕೊಡಬೇಕು. ಕೈಯಿಂದ ಬಿಡುಗಡೆ ಹೊಂದಿದ ಅಲ್ಪವೇ ಸಮಯದಲ್ಲಿ ಜಿರಳೆ, ಇಲಿ, ಇರುವೆಗಳು ಅದನ್ನು ಕೆಡಿಸದಂತೆ ಸಂರಕ್ಷಿಸಲು ಒಂದು ಶ್ರೀಗಂಧದ ಪೆಟ್ಟಿಗೆಯನ್ನು ಕೊಂಡು ತಂದರು.

ಅಮೆರಿಕೆಗೆ ಹೋದಾಗ ವಿಶ್ವಖ್ಯಾತಿಯ ರೋಲೆಕ್ಸ್ ಕೈಗಡಿಯಾರವನ್ನು ಇಳಿದ ಬೆಲೆಗೆ ಮಾರುವದಾಗಿ ವ್ಯಾಪಾರಿಯೊಬ್ಬ ಆಮಿಷ ತೋರಿದರೂ ರಾಯರು ಜಗ್ಗದೇ ತಮ್ಮದೇ ಉತ್ತಮವೆಂದು ವಾದಿಸಿದರು. ಸ್ವಿಝರ್ಲೆಂಡಿಗೆ ಹೋದಾಗ ಇಂತಹ ಅಪೂರ್ವದ ಕೈಗಡಿಯಾರದ ಉತ್ಪಾದನೆಗೆ ಸ್ವತಃ ಅವರ ಕಂಪನಿಗೆ ಹೋಗಿ ಅಭಿನಂದಿಸಿದರು. ಜರ್ಮನಿಯಲ್ಲಿ ಮಜಬೂತಾದ ಒಂದು ಕ್ಯಾಮರಾ ಕೊಂಡರೂ ಕೈಗಡಿಯಾರ ಬೇಡವೆಂದರು. ಫ್ರೆಂಚ್ ನಾರಿಯರು ಆಕರ್ಷಕವಾಗಿ ಕಂಡರೂ ಅವರ ಗಡಿಯಾರಕ್ಕೆ ಮನಸೋಲಲಿಲ್ಲ. ಇಂಗ್ಲೆಂಡ್, ಹಾಲಂಡ್, ಇಟಲಿ, ಗ್ರೀಸ್, ಈಜಿಪ್ಟ್, ಪಾಕಿಸ್ತಾನಗಳಿಗೆ ಭೇಟಿಯಿತ್ತು ಭಾರತಕ್ಕೆ ಹಿಂದಿರುಗಿದರೂ ಈ 'ಏಕಘಟಿ'ಯಲ್ಲಿ ಅಚಲವಾದ ವಿಶ್ವಾಸ ತೋರಿ ಹೋದಲ್ಲೆಲ್ಲ ಕರೆದೊಯ್ದರು.

ಮೂವತ್ತು ವರ್ಷಗಳ ಸುದೀರ್ಘ ಸೇವೆಯ ನಂತರ ಕೊಡಚಾದ್ರಿಯ ಬೆಟ್ಟವೇರಿದಾಗ ಅದು ಕೈಗಿದ್ದದ್ದು ಹಿಂದಿರುಗಿದಾಗ ಹೇಗೆ ಅದೃಶ್ಯವಾಯಿತೆಂಬುದು ಇಂದಿಗೂ ಗೂಢ ರಹಸ್ಯವಾಗಿಯೇ ಉಳಿದಿದೆ. ಅಲ್ಲಿಯ ಗ್ರಾಮ ದೇವತೆಗೆ ವಜ್ರ-ವೈಢೂರ್ಯಗಳ ಆಭರಣಗಳಿದ್ದರೂ ಸರಿಯಾದ ವೇಳೆ

ತಿಳಿಯದೇ ಕಷ್ಟವಾದ್ದರಿಂದ ಸುಲಭವಾಗಿ ಸಿಕ್ಕ ಇವರ ಕೈಗಡಿಯಾರಕ್ಕೆ ಮನಸ್ಸು ಮಾಡಿದಳೋ ಇಲ್ಲವೇ ಅಲ್ಲಿಯ ಅರ್ಚಕರ ಪತ್ನಿ ಗ್ರಾಮದೇವತೆ-ಯಾಗಲು ಇದು ಅತ್ಯವಶ್ಯ ಒಡವೆಯೆಂದು ನಂಬಿದಳೋ ತಿಳಿಯದು. ವಾಚ್ ಅಂತೂ ಹೋಗಿಬಿಟ್ಟಿತು. ಆದರೆ ಇದರಿಂದಾಗಿ ರಾಯರು ಹೊಸ ಮಾದರಿಯ ಹೊಚ್ಚ ಹೊಸ ಗಡಿಯಾರ ಕೊಳ್ಳಬಹುದೆಂಬ ನನ್ನ ನಿರೀಕ್ಷೆ ಹುಸಿಯಾಯಿತು. "ಸಮುದ್ರ ರಾಣಿ"ಯ ವಿಯೋಗದಿಂದ ಇವರ ಚೈತನ್ಯವೇ ಉಡುಗಿ ಹೋದಂತಾಯಿತು. ಯಾವುದರಲ್ಲೂ ಆಸಕ್ತಿಯಿಲ್ಲ. ಊಟ ತಿಂಡಿಯೂ ರುಚಿಸದು. ನಿದ್ರೆಯಲ್ಲಿಯೂ ಗಡಿಯಾರ ಕುರಿತು ಕನವರಿಸ ಲಾರಂಭಿಸಿದರು. ಇದನ್ನು ನೋಡಲಾರದೇ ತಮ್ಮನು ಅತ್ಯುತ್ತಮ "ನಾಗರಿಕ" ಕೈ ಗಡಿಯಾರವನ್ನು ಉಡುಗೊರೆಯಾಗಿ ಕೊಟ್ಟನು. ಆದರೆ ಅದರಲ್ಲಿ ಅವರು ಆಸಕ್ತಿ ತಾಳದ್ದರಿಂದ, ಹೊಂಚುಹಾಕಿ ಕುಳಿತಿದ್ದ ಚಿರಂಜೀವನು, ಅದು ಕಾಲೇಜು ವಿದ್ಯಾರ್ಥಿಗಳು ಮಾತ್ರ ಬಳಸುವ ವಾಚ್ ಎಂದು ತಂದೆಯನ್ನು ನಂಬಿಸಿ ತಾನೇ ಎತ್ತಿಹಾಕಿದ. ಇನ್ನೊಂದು ಜಪಾನೀ ಗಡಿಯಾರವನ್ನು ಮೂರನೆಯ ತಮ್ಮ ಉಡುಗೊರೆಯಾಗಿತ್ತ ಅದು ಅವರ ಅಗಲವಾದ ಬಲಿಷ್ಠ ಕೈಗೆ ಎದ್ದು ಕಾಣುವದಿಲ್ಲವೆಂದು ಮನಗಾಣಿಸಿ, ನನ್ನದನ್ನಾಗಿ ಮಾಡಿಕೊಂಡೆ.

ಇದ್ದಕ್ಕಿದ್ದಂತೆ ಒಂದು ಮುಂಜಾನೆ ನಾಲ್ಕು ಗಂಟೆಗೇ ರಾಯರು ಚಟು ವಟಿಕೆಯಿಂದ ತುಂಬಿಕೊಂಡು ಸಿಳ್ಳುಹಾಕುತ್ತಿದ್ದುದನ್ನು ನೋಡಿ ಖುಷಿ ಯಾಯ್ತು ಬಿಸಿಬಿಸಿ ಕಾಫಿ ತಂದು ಕೈಗಿತ್ತಾಗ, ನನ್ನನ್ನು ನೋಡಿ. ಎಷ್ಟೋ ಕಾಲದ ನಂತರ ಗೆಲುವಿನಿಂದ ನಕ್ಕರು. ಆ ಡಬ್ಬಿ, ಈ ಪೆಟ್ಟಿಗೆ ಹೊರಗೆಳೆದು ಏನೇನೋ ಹುಡುಕುತ್ತಿದ್ದರು. ಅವುಗಳಲ್ಲಿ ಕಳೆದುಕೊಂಡ ಗಡಿಯಾರ ಇರುವ ಸಾಧ್ಯತೆ ತೀರಕಡಿಮೆ ಎಂದು ವಿವರಿಸಹೊರಟಾಗ, ಖಾಲಿ ಲೋಟ ಕೈಗಿತ್ತು ಅಡಿಗೆ ಮನೆಗೆ ಹಿಂದಿರುಗಲು ಸಂಜ್ಞೆಯಿಂದಲೇ ಹೇಳಿದರು. ಆ ದಿನವೆಲ್ಲ ಅಲ್ಲಿ ಇಲ್ಲಿ ಓಡಾಡಿ ಅಂತೂ ಏನೇನೊ ಕಾರುಭಾರ ನಡೆಸಿದ್ದರು. ಆ ಸಂಜೆ ಅವರ ಸ್ವಂತ ಬೋಲಿ (ಗುಜರಿಸ್ತಾನ್) ದೀಪಾವಳಿಯಂತೆ, ನಂದಾದೀಪ

ಗಳಿಂದ ಝುಗಝುಗಿಸುತ್ತಿದ್ದುದನ್ನು ನೋಡಿ ಅವಾಕ್ಕಾದೆ. ಗೋಣನ್ನು ಒಂಟಿಯಾದನ್ನಾಗಿ ಮಾಡಿಕೊಂಡು ಒಳಗೆ ಹಣಿಕೆ ಹಾಕಿದೆ. ನಂಬುವದೇ ಕಷ್ಟವಾಯಿತು. ಮದುವೆಯಾದ ಹೊಸದರಲ್ಲಿ ತನ್ನ ಹಿರಿಯ ಪತ್ನಿಯಾದ ಕೈಗಡಿಯಾರವನ್ನು ಅಲಕ್ಷಿಸಬಾರದೆಂದು ಅದನ್ನು ಸೂರ್ಯಕಾಂತಿ ಹೂಗಳಿಂದ ಅಲಂಕರಿಸಿ ಛಾಯಾಚಿತ್ರವೊಂದನ್ನು ಸೆರೆಹಿಡಿದಿದ್ದರು. ಅದರ ಪ್ರತಿಯನ್ನು ನನಗೆ ಎಂದೂ ತೋರಿಸಿರಲಿಲ್ಲ ಈಗ ಅದನ್ನು ಬೃಹದಾಕಾರಕ್ಕೆ ಹಿಗ್ಗಿಸಿ ಅದಕ್ಕೆ ಗಾಜಿನ ಕಟ್ಟು ಹಾಕಿಸಿದ್ದಾರೆ. ಗೋಡೆಗೆ ಆನಿಸಿ, ಟೇಬಲ್ ಮೇಲೆ ಇಟ್ಟು ಸುತ್ತಲೂ ಮೋಂಬತ್ತಿಗಳನ್ನು ಉರಿಸಿದ್ದಾರೆ. ಎದುರಿಗೆ ಧ್ಯಾನಸ್ಥರಾಗಿ ಕುಳಿತು ತದೇಕಚಿತ್ತರಾಗಿ ಕಣ್ಮರೆಯಾದ ಗಡಿಯಾರವನ್ನು ದಿಟ್ಟಿಸುತ್ತ ಕುಳಿತಿದ್ದಾರೆ! ಅವರ ಪ್ರೀತಿ-ವಿಶ್ವಾಸಗಳ ಅಗಾಧತೆಯನ್ನು ಕಂಡು ದಿಙ್ಮೂಢಳಾದೆ. ಉಳಿದವರಿಗೆ ಅದು ಒಂದು ಕೇವಲ ಛಾಯಾಚಿತ್ರವಾಗಿದ್ದರೆ, ರಾಯರಿಗೆ ಜೀವ ಕಳೆಯಿಂದ ನಳನಳಿಸುವುದು. ತಮ್ಮ ಕೈ ಗಡಿಯಾರ ಅದು ಒಂದಡೆ ಸ್ಥಾಯಿಯಾಗಿ ನಿಂತರೂ ಇವರು ಮಾತ್ರ ಅದನ್ನು ನೋಡಿ ಸರಿಯಾಗಿ ವೇಳೆಯನ್ನು ಸದಾಕಾಲ ಹೇಳಲಾರಂಭಿಸಿದರು. ಕಗ್ಗತ್ತಲಿನ ಮಧ್ಯರಾತ್ರಿ ವಿಚಾರಿಸಿದರೂ ಹಿಂದೆ ಮುಂದೆ ನೋಡದೇ ಉಸುರುತ್ತಿದ್ದರು. ನಾನು ಬೆಚ್ಚಗಿನ ಹಾಸಿಗೆ ಹೊದ್ದಿಕೆ ಬಿಟ್ಟು ಬಂದು ಕೈಗಡಿಯಾರ ನೋಡಿದಾಗ, ಇವರು ಹೇಳಿದ ವೇಳೆ ಸರಿಯಾಗಿಯೇ ಇರುತ್ತಿತ್ತು. ಇವರು ಛಾಯಾಗ್ರಹಣಪ್ರಿಯರು. ಅದರ ಯಶಸ್ಸಿಗೆ ಪ್ರತಿಯೊಂದು ಕ್ಷಣವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಆ ಮೂಕ ಚಿತ್ರ ಗಡಿಯಾರ ನೋಡಿ ಇವರು ಕತ್ತಲೆ ಕೋಣೆ ಕೆಲಸ ಹೇಗೆ ನಿಭಾಯಿಸುತ್ತಾರೆಂಬುದು ನಿಗೂಢವಾಗಿಯೇ ಉಳಿದಿದೆ. ಆ "ಜೀವನ ಸಂಗಾತಿ" ಮಾಯವಾದರೂ ಅವರು ಒಂದು ದಿನವೂ ವಿಳಂಬವಾಗಿ ಎದ್ದಿಲ್ಲ. ರೇಲು, ಮೋಟಾರು ಸಾರಿಗೆ ತಪ್ಪಿಸಿಕೊಂಡಿಲ್ಲ. ಅಲ್ಲದೇ ಕೈಗಡಿಯಾರದವರು ದಾರಿಹೋಕರಿಗೆ ತಪ್ಪು ವೇಳೆ ಹೇಳಿದಾಗ ಇವರೇ ತಿದ್ದುತ್ತಿದ್ದರು. ಆದ್ದರಿಂದ ಕೆಲಸಗಾರರು, ವೇಳೆ ಅರಿಯದವರು, ಪ್ರತಿದಿನವೂ ಇವರ ನೆರವನ್ನು ಪಡೆಯಲಾರಂಭಿಸಿದರು.

ಗಡಿಯಾರಗಳಿಗೂ ನನಗೂ ಎಂದೂ ಹೊಂದಾಣಿಕೆ ಆಗಲಿಲ್ಲ. ಕೀಲಿ ಕೊಡಲು ಮರೆವು. ಕಟ್ಟಿಕೊಳ್ಳಲು ಮರವು. ಎಲ್ಲಿ ಇಟ್ಟಿದ್ದೇನೆಂದು ಕೂಡಾ

ಮರವು ! ಆದ್ದರಿಂದ ಇರುವ 2–3 ಕೈಗಡಿಯಾರಗಳು, ತಮಗೆ ಬೇಕಾದ ವೇಳೆಯನ್ನು ತೋರಿಸುತ್ತಿರುತ್ತವೆ. ಮೊದಲನೆಯದರ ಅಂಕಿಗಳು ತೀರಾ ಚಿಕ್ಕವು ಎಂದು ಎರಡನೆಯದನ್ನು ಕೊಂಡೆ. ಅದು ಗೋಕರ್ಣಕ್ಕೆ ಹೋದಾಗ ಕಡಲ ತೆರೆಗಳೊಡನೆ ಚಕ್ಕಂದವಾಡಿ ನೀರು ಕುಡಿದು ಸಮಾಧಿಸ್ಥ ವಾಯಿತು. ಮೂರನೆಯದನ್ನು ಕೊಂಡೆ.ಅದರ ಮೇಲೆ ಅಂಕಿಗಳ ಸ್ಥಾನದಲ್ಲಿ ಕೇವಲ ಚುಕ್ಕಿಗಳಿದ್ದವು. ಚಾಳೀಸು ಹಾಕದೇ ಕಾಣಿಸುತ್ತಿರಲಿಲ್ಲವೆಂದು ನಾಲ್ಕನೆಯದಕ್ಕೆ ಶರಣುಹೋದೆ. ಉಡುಗೊರೆಯಾಗಿ ಒಂದು ಬಂದಿತ್ತು. ರಾಯರದೂ ಒಂದನ್ನು ಹಾರಿಸಿದ್ದೆ. ಇಷ್ಟಾದರೂ ಸರಿಯಾದ ವೇಳೆ ತಿಳಿಯುವುದೇ ಕಷ್ಟಕ್ಕಿಟ್ಟುಕೊಂಡಿತು. ಒಂದು, ಅರ್ಧತಾಸು ಮುಂದೆ ಇದ್ದರೆ ಇನ್ನೊಂದು ಅರ್ಧತಾಸು ಹಿಂದೆ, ಮತ್ತೊಂದು ಇಂಗ್ಲೆಂಡಿನ ವೇಳೆ ತೋರಿಸಿದರೆ, ಮಗುದೊಂದು ಅಮೆರಿಕಾದ್ದು ತೋರಿಸುತ್ತಿತ್ತು. ಈ ಎಲ್ಲವನ್ನು ಕೂಡಿಸಿ, ಗುಣಾಕಾರ, ಭಾಗಾಕಾರ ಮಾಡಿ ಸರಿಯಾದ ವೇಳೆ ಅರಿಯಲು, ಮೊದಲೇ ಗಣಿತ ಕಚ್ಚಾ ಇದ್ದವಳಿಗೆ ತೀರ ಕಷ್ಟದ ಕೆಲಸವೆಂದು ಬೇರೆ ಹೇಳಬೇಕೆ ? ಅಂತೆಯೇ ಎಲ್ಲ ಕೈಗಡಿಯಾರಗಳನ್ನು ಮೂಲೆಗೊತ್ತಿ ವೇಳೆಯ ತಿಳಿಯಲು ಜೀವಂತ ಗಡಿಯಾರ ರಾಯರನ್ನು ನಂಬಿದ್ದೇನೆ. ಈ ಗಡಿಯಾರಕ್ಕೆ ಹಣ ತೊಡಗಿಸಬೇಕಾಗಿಲ್ಲ. ಪ್ರತಿನಿತ್ಯ ಕೀಲಿ ತಿರುಗಿಸಬೇಕೆಂದಿಲ್ಲ. ಸಿಕ್ಕಲ್ಲಿಟ್ಟು ಮರೆಯುವ ಸಾಧ್ಯತೆಯಿಲ್ಲ. ಇದು ಮುರಿಯುವದಿಲ್ಲ. ಒಡೆಯುವದಿಲ್ಲ. ಸ್ತಬ್ಧವಾಗುವ ಭಯವಿಲ್ಲ. ರಿಪೇರಿಯ ಅಗತ್ಯವಿಲ್ಲ. ಕಳ್ಳಕಾಕರಿಗದು ಬೇಕಿಲ್ಲ. ಇಂಥ ಜೀವಂತ ಗಡಿಯಾರ ನಿಮಗೆ ಲಭಿಸೀತೆ ?

# ಬಂಧುಗಳ ಗೊಂದಲ



'ಮದುಮಗನು ಸ್ಥೂಲಕಾಯ, ಆನೆಯಂತೆ ಬೆಳೆಯುವ ಲಕ್ಷಣಗಳಿವೆ! ಆದರೆ ತಮ್ಮನ್ನು ಆಡಿನಂತಿದ್ದು ಸುಟಿಯಾಗಿದ್ದಾನೆ!' ನೆಂಟಸ್ಥಿಕೆಗೆ ಹೋಗಿ ಬಂದು ನುಡಿದರು ನನ್ನ ಪಿತ ಮಹಾಶಯರು! ವಧು ಪರೀಕ್ಷೆಗೆ ಹೋಗಿ ಅಕ್ಕನ ಬದಲು ತಂಗಿಯನ್ನು ವಿವಾಹವಾದ ನಿದರ್ಶನಗಳಿದ್ದರೂ, ಅಣ್ಣನನ್ನು ಬಿಟ್ಟು ತಮ್ಮನನ್ನು ಮದುವೆಯಾದ ಒಂದೇ ಒಂದು ಪ್ರಕರಣ, ಗಮನಕ್ಕೆ ಬಾರದೇ ಇದ್ದುದರಿಂದ ಪಾಲಿಗೆ ಬಂದದ್ದೇ ಪಂಚಾಮೃತವೆಂದು ಗಜರಾ ನಂತಿದ್ದ ಪತಿಯೊಡನೆ ಸಂಸಾರ ಹೂಡವದನ್ನು ನಿರ್ಧರಿಸಿದೆ. ಶಾಲಾ-ಕಾಲೇಜ ದಿನಗಳಲ್ಲಿ ಇವರು ಆಡಿನಂತೆಯೇ ಬಡಕಲಾಗಿದ್ದರು, ಎಂದು ನಂಬ ವದೇ ಕಷ್ಟವಾಯಿತು. ವಿವರಣೆ ಕೇಳಿದಾಗ ವಿದ್ಯಾರ್ಥಿಯಾಗಿದ್ದಾಗ, ತಂ ಯವರು ಕಷ್ಟಪಟ್ಟು ಗಳಿಸಿದ ಹಣವನ್ನು ಖರ್ಚು ಮಾಡಲು ಮನಸ್ಸಾಗದೆ ಊಟ-ತಿಂಡಿಯಲ್ಲಿ ಕಠೋರ ಶಿಸ್ತನ್ನು ಪಾಲಿಸುತ್ತಿದ್ದೆ. ಹೀಗಾಗಿ 'ಕಡ್ಡಿ ಪೈಲವಾನ್' ಆಗಿದ್ದೆ. ಕಲಿತ ಕಾಲೇಜಿನಲ್ಲಿಯೇ ಶಿಕ್ಷಕನಾಗಿ ಸೇರಿದಾ

ನನಗಿಷ್ಟವಿದ್ದ ಹಾಲು ಕುಡಿದು ಬಲೂನಿನಂತೆ ಉಬ್ಬಲಾರಂಭಿಸಿದೆ. ಆತಿ ಮೋಜಿನ ಮಾತೆಂದರೆ ವಿದ್ಯಾರ್ಥಿಯಾಗಿದ್ದಾಗ ಹೋಗುತ್ತಿದ್ದ ಮಾಮಾನ ಖಾನಾವಳಿಯಲ್ಲೇ ಊಟ ಮುಂದರಿಸಿದ್ದೆ. ನೆನಪಾದಾಗೊಮ್ಮೆ ಚಹಾ-ಕಾಫಿ-ತಿಂಡಿ ಸೇವಿಸುವ ಚಟ, ಎಂದಿಗೂ ನನ್ನದಾಗಿರಲಿಲ್ಲ. ಆದ್ದರಿಂದ ಈ ಕೊಬ್ಬು, ಕೇವಲ ಆತ್ಮತೃಪ್ತಿಯಿಂದಲೇ ಸಂಚಯವಾಗುತ್ತಿರಬೇಕು. ಕೆಲವರು ಎಂಥ ನೆಣದ ಪದಾರ್ಥಗಳನ್ನು ತಿಂದರೂ ಅದು ನೀರಾಗಿ ಬಿಡುವದರಿಂದ ಅವರು ಸದಾಕಾಲ ಬಡಕಲಾಗಿಯೇ ಇರುತ್ತಾರೆ. ನನ್ನಂಥವರು ನೀರು ಕುಡಿದರೂ ಅದು ಕೊಬ್ಬಾಗಿ ಮಾರ್ಪಡುತ್ತಿರಬೇಕು!" ಎಂದು ನಕ್ಕರು. ನಂತರದ ದಿನಗಳಲ್ಲಿ ಇವರನ್ನು ಆಡು ಮಾಡುವ ಯತ್ನದಲ್ಲಿ ನಾನೇ ಮರಿಯಾನೆಯಾಗಲಾರಂಭಿಸಿದೆ. ರಾಯರ ಸಹವಾಸದಲ್ಲಿ ಕುಡಿದ ನೀರೂ ಕೊಬ್ಬಾಗುತ್ತದೆಯೆಂದು ಪ್ರತ್ಯಕ್ಷ ನಿದರ್ಶನವಾದೆ, ವರ್ಷಗಳು ಕಳೆದಂತೆ.

ಇವರ ಹಿರಿಯ ತಮ್ಮ ಉಮೇಶನೂ ವಿವಾಹದ ನಂತರ ಉದ್ದಿನಂತೆ ಉಬ್ಬಲಾರಂಭಿಸಿದ. ಎರಡನೆಯ ತಮ್ಮ ತುಳಸೀದಾಸ (ತುಳಸು) ರಾಯರಿಗಿಂತ ಇಪ್ಪತ್ತು ವರ್ಷ ಕಿರಿಯ. ಇಪ್ಪತ್ತು ವರ್ಷದ ಕನ್ಯೆಯೊಡನೆ ಈತನ ವಿವಾಹ ಏರ್ಪಟ್ಟಾಗ, ಕೃಶಾಂಗಿಯಾಗಿದ್ದ ಪತ್ನಿ ಪತಿಯೊಂದಿಗೆ ಸ್ಪರ್ಧೆಗಿಳಿದಳು. ಫೂಟ್‌ಬಾಲ್‌ನಂತಾದಳು. ಮೋಜಿನ ಮಾತೆಂದರೆ ಅವಳ ಇನ್ನು ಮೂವರು ಭಗಿನಿಯರು ಇಂದಿಗೂ ಲತಾಂಗಿಯರಾಗಿದ್ದಾರೆ! ಅಂತೆಯೇ ತುಳಸು ಪತ್ನಿ, ಈ ಗಂಡನ ಮನೆ ಬಾವಿಯ ನೀರು ಕುಡಿದರೇ ದಪ್ಪವಾಗುತ್ತಾರೆಂದು ಡಂಗುರ ಸಾರಲಾರಂಭಿಸಿದಳು. ಇವರಿಗಿಂತ ಕಾಲು ಶತಕದ ನಂತರ ಹುಟ್ಟಿ ಬಂದ ಮೂರನೆಯ ತಮ್ಮ ಗಜಾನನನು ಮದುವೆಯ ನಂತರ ಪತ್ನಿಯ ಪಾಲಿನ ನೆಣವನ್ನೂ ತಾನೇ ಪಡೆದು ಕಪ್ಪೆಯಂತೆ ಉಬ್ಬಲಾರಂಭಿಸಿದ. ಅವನು ದ್ವಿಚಕ್ರ ವಾಹನದಲ್ಲಿ ಹೊರಟನೆಂದರೆ ಬಡಪಾಯಿ ಇಲಿಯ ಮೇಲೆ ಸವಾರಿ ಮಾಡುವ ಗಣೇಶನು ಕಣ್ಣಿಗೆ ಕಟ್ಟುತ್ತಾನೆ. ಇದರಿಂದ ಪರಿಚಯದವರೆಲ್ಲ ಈ ಕಾಮತ ಕುಟುಂಬದ ಮೇಲೆ ವಿಶೇಷ ಕೊಬ್ಬಿನ ಕರ ಹೇರಬೇಕೆಂದು ಕುಚೋದ್ಯ ಮಾಡಲಾರಂಭಿಸುತ್ತಾರೆ. ಕರಾವಳಿಯಲ್ಲಿ

ಪೈ, ಶಾನಭಾಗ, ನಾಯ್ಕ, ಕಾಮತರು ಅಸಂಖ್ಯಾತರಿರುವದರಿಂದ, ಒಬ್ಬರಿಂದ ಇನ್ನೊಬ್ಬರನ್ನು ಗುರುತಿಸಲಿಕ್ಕೆ ಕಿರಿದಾದ ಅನ್ವರ್ಥಕನಾಮವನ್ನು ಬಳಸು ವದು ವಾಡಿಕೆ. ಅಂತೆಯೇ ಕಾಮತ ಬಂಧುಗಳನ್ನು ಮೋಠಾ, (ದಪ್ಪಗಿನ ಆಸಾಮಿ), ಪೋಟ್ಯಾ (ಡೊಳ್ಳು ಹೊಟ್ಟೆ) ಠಾಂಬ್ಯಾ ಬೊಡ (ಕಂಚು ತಲೆ, ಬೋಳು ತಲೆ) ಎಂದೆಲ್ಲ ಜನ ನಿರ್ದಿಷ್ಟವಾಗಿ ಗುರುತಿಸಲಾರಂಭಿಸಿದರು. ಒಟ್ಟಿಗೇ ಇದ್ದಾಗ ಪರಸ್ಪರರನ್ನು ಗುರುತಿಸುವದು ಕಷ್ಟದ್ದಾದಾಗ, ತಾನು ಮೋಠಾ, ಈತನು ಪೋಟ್ಯಾ ಅಲ್ಲವೇ ? ಎಂದು ಸಹಾಯಕ್ಕೆ ಹೋದಾಗ ಇತರರು ಹೊಟ್ಟೆ ಬಿರಿಯುವಂತೆ ನಕ್ಕು ಬಿಡುತ್ತಿದ್ದರು. ರಸಿಕ ಶಿಖಾಮಣಿಗಳು ಹೊನ್ನಾವರದ ಸ್ಥೂಲ ಕಾಮತ ಬಂಧುಗಳ ಹಿಂದಿನ ತಲೆಮಾರಿ ನಿಂದಲೂ ಹಾಡು ಕಟ್ಟಿ ಮಕ್ಕಳಿಂದ ಹಾಡಿಸಿದ್ದರು. ಅದು 'ಚೋಲಿಕೆ ಪೀಛೆ ಕ್ಯಾಹೈ'....ಪದ್ಯಕ್ಕಿಂತ ಹೆಚ್ಚು ಜನಪ್ರಿಯವಾಗಿತ್ತು ಎಂದರೆ ನಂಬು ವದು ಕಷ್ಟವಾದೀತು ! ಹೆಸರಿನ ಕೊಂಚ ಮಾರ್ಪಾಡಿನ ಜೊತೆಗೆ ಇಂದಿಗೂ ಅನೂಚಾನವಾಗಿ ಬಂದ ಹಾಡಿನ ಪಂಕ್ತಿಗಳು ಹೀಗಿವೆ :

ಪ್ರೀತಿ, ಜೀವನದ ಜ್ಯೋತಿ
ಶುಭಮತಿ, ವಾಸದೇವಕಾಮ್ತಿ
ಡೊಳ್ಳ ಹೊಟ್ಟೆ (ರಾಮ ಗಜ) ಕಾಮ್ತಿ

ರಾಯರು ಮತ್ತು ತುಳಸುರಲ್ಲಿ ತಂದೆ–ಮಗನ ವಯಸ್ಸಿನ ಅಂತರ ವಿದ್ದರೂ ಇಬ್ಬರನ್ನೂ ಒಟ್ಟಿಗೆ ನೋಡುವ ಮೊದಲಿಗರು ವಿಂಗಡಿಸುವದು ಕಷ್ಟದ ಕೆಲಸ ! ಅಪರೂಪಕ್ಕೆ ನೋಡುವವರು, ಮೋಸ ಹೋಗುವದೇ ಹೆಚ್ಚು. ಕೌಟುಂಬಿಕ ಸಮಾರಂಭವೊಂದರಲ್ಲಿ ಹಿರಿಯ ಸೋದರತ್ತೆ ಎದುರಿಗೆ ಬಂದ ತುಳಸುವನ್ನು 'ಯಾಕಯ್ಯಾ, ಪತ್ನಿಯನ್ನು ಬೆಂಗಳೂರಿನಲ್ಲೇ ಬಿಟ್ಟು, ಪಾಯಸ ಉಣ್ಣಲು ನೀನೊಬ್ಬನೇ ಬಂದೆಯ ?' ಎಂದು ಮೂದಲಿಸಿದಾಗ, 'ನನ್ನ ಅರ್ಧಾಂಗಿನಿ ಸದಾಕಾಲ ನನ್ನನ್ನು ನೆರಳಿನಂತೆ ಹಿಂಬಾಲಿಸುತ್ತಾಳೆ. ಮಾಮಿಯವರೇ', ಎಂದು ಹತ್ತಿರದಲ್ಲೇ ಇದ್ದ ಹೆಂಡತಿಯನ್ನು ಕೈಹಿಡಿದೆಳೆದು ಅವರೆದುರು ನಿಲ್ಲಿಸಿದಾಗ ಅವರಿಗೆ ತಮ್ಮ ತಪ್ಪಿನ ಅರಿವಾಯಿತು. 'ಅಲ್ಲಯ್ಯಾ

ನೀನು ಕೃಷ್ಣಾನಂದನಂತೆ ಕಾಣಿಸುವಷ್ಟು ಬೆಳೆದು ಬಿಟ್ಟಿರುವಿಯಲ್ಲ? ನೀವೆಲ್ಲ ಹತ್ತಿಕಾಳು ಅರೆದು ಸೇವಿಸುತ್ತೀರಾ?' ಎಂದು ಹಾಸ್ಯ ಮಾಡಿದ್ದರು.

ಉಮೇಶನ ಹಿರಿಯ ಮಗಳು ವಿಭಾಳ ವಿವಾಹಕ್ಕೆ ಕಾರಣಾಂತರಗಳಿಂದ ಹೋಗದಿರಲು ನಿರ್ಧರಿಸಿದ್ದೆವು. ಆದರೆ ಕೊನೆಗಳಿಗೆಯಲ್ಲಿ ಕುಟುಂಬದ ಎಲ್ಲ ಸದಸ್ಯರ ಒತ್ತಡ ಹೆಚ್ಚಾಗಿ ಹೊರಡಲೇಬೇಕಾಯಿತು. ರಾಯರಿಗೆ ತಮ್ಮ ಅಂದ ಚೆಂದ, ಬಟ್ಟೆ ಬರೆಗಳ ಬಗ್ಗೆ ಎಂದೂ ಯೋಚನೆ ಬಾಧಿಸಿಲ್ಲ. ಹೀಗಾಗಿ ಮದುವೆಯಂಥ ಸಮಾರಂಭಕ್ಕೆ ತೊಡುವಂಥ ಒಳ್ಳೆಯ ಬಟ್ಟೆಯೇ ಅವರ ಬಳಿ ಇರಲಿಲ್ಲವೆಂದು ಮುಸಿಸಿನಿಂದ ಇದ್ದೆ. ಕೊನೆಗೆ ತುಳಸು ತಾನು ಹೊಸದಾಗಿ ಹೊಲಿಸಿದ ಬುಶ್‌ಶರ್ಟ್‌ಗಳಲ್ಲಿ ಒಂದನ್ನು ಅಣ್ಣನಿಗೆ ತೊಡಿಸಿದಾಗ, ಅರೇ! ಅವರಿಗಾಗಿಯೇ ಹೇಳಿ ಹೊಲಿಸಿದಂತಿತ್ತು. ಇದನ್ನು ಅರಿಯದ ತುಳಸು ಹೆಂಡತಿ, ವಿಜಯಾಳು ಕೆಲ ಹೊತ್ತಿನ ಮೇಲೆ ಬಂದು ಮಗಳು ಪವಿತ್ರಾ ಎಲ್ಲಿ? ಎಂದು ಮದುವೆಯ ಗೌಜಿನಲ್ಲಿ ಕೇಳುವದಿಲ್ಲವೆಂದು ರಾಯರ ಬೆನ್ನಿಗೆ ಗುದ್ದಿ ವಿಚಾರಿಸಿದಳು. "ನಮ್ಮ ಮಗಳು ಇನ್ನೂ ಹುಟ್ಟಿಯೇ ಇಲ್ಲವಮ್ಮ" ಎಂದು ರಾಯರ ಹಾಸ್ಯ ಧ್ವನಿ ಬುಶ್‌ಶರ್ಟ್ ದಾಟಿ ಬಂದಾಗ, ದಿಗ್ಭ್ರಮೆಗೊಂಡು ಅದೃಶ್ಯವಾಗಿ ಬಿಟ್ಟಳು!

ರಾಯರು ಎಸ್.ಎಸ್.ಎಲ್.ಸಿ. ಪಾಸು ಮಾಡಿದ ನಂತರ ಶಿಕ್ಷಣಕ್ಕಾಗಿ ಹೊನ್ನಾವರ ಬಿಟ್ಟವರು, ಬೇರೆ ನಗರ, ರಾಜ್ಯ, ದೇಶ-ವಿಶ್ವದ ತುಂಬ ಅಲೆಮಾರಿಯಾಗಿ ಅಲೆದು, ಹುಟ್ಟೂರಿನಲ್ಲಿಯೇ ಅಪರಿಚಿತರಾಗಿ ಬಿಟ್ಟರು. ಅಂತೆಯೇ ಊರಿನ ಬಹು ಸಂಖ್ಯಾತರಿಗೆ ಲಕ್ಷ್ಮಣ ಕಾಮತರಿಗೆ ಮೂವರು ಗಂಡು ಮಕ್ಕಳು. ಅವರಲ್ಲಿ ಉಮೇಶನೇ ಹಿರೇಯವ, ಎಂಬ ನಂಬಿಕೆ. ಒಮ್ಮೆ ವಾಚನದಲ್ಲಿ ಅಭಿರುಚಿಯುಳ್ಳ ಹೊನ್ನಾವರದ ನವ ದಂಪತಿಗಳು ಸ್ಥಳೀಯ ವಾಚನಾಲಯದಿಂದ 'ನಾನೂ ಅಮೇರಿಕೆಗೆ ಹೋಗಿದ್ದೆ' ಪ್ರವಾಸ ಕಥನ ಓದಿ ಬಹುವಾಗಿ ಮೆಚ್ಚಿಕೊಂಡಿದ್ದರು. ಪತ್ನಿಯನ್ನು ಕುರಿತು, 'ಈ ಲೇಖಕರು ನಮ್ಮ ಊರಿನವರಂತೆ. ಯಾವ ಕಾಮತ್ ಕುಟುಂಬದವರೋ ಏನೋ!' ಎಂದು ವಿಸ್ಮಯ ಪಟ್ಟಾಗ, 'ಅಯ್ಯೋ ನಿಮಗೆ ತಿಳಿಯದೇ? ಅವರು ಲಕ್ಷ್ಮಣ ಕಾಮತರ ಹಿರಿಯ ಮಗ' ಪತ್ನಿ ಎಂದಾಗ ಅವರು ಗಹ

ಗಹಿಸಿ ನಕ್ಕು 'ಇಂಪಾಸಿಬಲ್ ! ವ್ಯಾಪಾರ ಮಾಡಿ ಹಣ ಎಣಿಸುವವರ ಕುಟುಂಬದವರು ವಿದೇಶಕ್ಕೆ ಹೋಗಿ ಡಾಕ್ಟರೇಟು ಮಾಡುತ್ತಾರೆಯೇ ? ಇಷ್ಟು ಒಳ್ಳೆಯ ಲೇಖಕರು ಬೇರೆ ಆಗುತ್ತಾರೆಯೇ ?' ಎಂದು ಸವಾಲು ಹಾಕಿದರು.

ಹೆಂಡತಿ, "ಈಗ ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿರುವವರ ಅಣ್ಣ, ಅಮೇರಿಕೆಗೆ ಹೋಗಿ ಬಂದಿದ್ದಾರೆ. ನಾನು ನ್ಯೂ ಇಂಗ್ಲಿಷ್ ಸ್ಕೂಲ್ (ಕಾಮತರು ಕಲಿತ ಶಾಲೆ) ವಿದ್ಯಾರ್ಥಿಯಾಗಿದ್ದಾಗ ಅವರನ್ನು ಕರೆಸಿದ್ದರು. ನಾನು ಧೈರ್ಯದಿಂದ 'ನೀವು ಅಮೇರಿಕನ್ ಕನ್ಯೆಯ ಮೋಹ ಜಾಲದಲ್ಲಿ ಸಿಲುಕಿಕೊಳ್ಳಲಿಲ್ಲವೇ ?' ಎಂದು ಪ್ರಶ್ನಿಸಿದಾಗ, 'ಹಾಗೆ ಮಾಡಿದ್ದರೆ ಈಗ ನಮ್ಮನ್ನೆಲ್ಲ ಕಾಣಲು ಇಲ್ಲಿ ಬರುವದು ಸಾಧ್ಯವಿತ್ತೇ ?' ಎಂದು ಉತ್ತರಿಸಿ ನಮ್ಮನ್ನೆಲ್ಲ ನಗಿಸಿದ್ದರು" ಎಂದು ನೆನಪಿಸಿಕೊಂಡಳು. ಆದರೂ ಪತಿರಾಯನಿಗೆ ಮನವರಿಕೆ ಆಗಲೇ ಇಲ್ಲ. "ನಾನು ಮಗುವಾದಾಗಿನಿಂದ ಲಕ್ಷ್ಮಣ ಕಾಮತರ ಅಂಗಡಿಗೆ ಹೋಗಿ ಬರುತ್ತಿದ್ದೇನೆ. ಅವರ ಮಕ್ಕಳ ಬಗ್ಗೆ ನನಗಿಂತ ನಿನಗೆ ಹೆಚ್ಚು ಗೊತ್ತೆ" ಎಂದು ಕೆಣಕಿದರು. "ಅದೆಲ್ಲ ಬೇಡ, ನಾನು ಹೇಳಿದ್ದು ಸರಿಯಾದರೆ ಅವರ ಅಂಗಡಿಯಿಂದಲೇ ಒಂದು ಸೀರೆಯನ್ನು ಕೊಡಿಸಬೇಕು. ನೀವು ತಿಳಿದುಕೊಂಡದ್ದು ಸರಿ ಇದ್ದರೆ, ನಾನು ಒಂದು ಶರ್ಟ್ ಬಟ್ಟೆ ಕೊಡಿಸುತ್ತೇನೆ" ಅಂದಾಗ ಒಪ್ಪಿ ಇಬ್ಬರೂ ಅಂಗಡಿಗೆ ಬಂದರು. ಪತ್ನಿ ಹೇಳಿದ್ದು ಸರಿ ಎಂದು ಉಮೇಶನು ದೃಢೀಕರಿಸಿದಾಗ ಪತ್ನಿಗೆ ಹೊಸ ಸೀರೆ ದಕ್ಕಿತು !

ವ್ಯಾಪಾರದಲ್ಲಿ ತೊಡಗಿದ ಇನ್ನೂ ಮೂವರು ಬಂಧುಗಳ ಧನ ಸಂಗ್ರಹ ಬೆಳೆದಂತೆ ದೇಹವೂ ಬೆಳೆಯಲಾರಂಭಿಸಿತು. ಅಂತೆಯೇ ಅಣ್ಣನು ತಮ್ಮನಾಗಿಯೂ, ತಮ್ಮಂದಿರು ಅಣ್ಣನಂತೆಯೂ ತೋರಲಾರಂಭಿಸಿದರು. ಅನೇಕ ವರ್ಷ ಉಮೇಶನೊಂದಿಗೆ ಜವಳಿ ವ್ಯಾಪಾರ ಇಟ್ಟುಕೊಂಡಿದ್ದ ಗುರುಪುರದ ವಾಸುದೇವ ಪ್ರಭುಗಳಲ್ಲಿ ಒಮ್ಮೆ ರಾಯರು ತಲುಪಿದಾಗ ಹಿರಿಯಣ್ಣನೆಂದು ಅವರಿಗೆ ನಂಬುವದೇ ಕಷ್ಟವಾಯಿತು. ಹೀಗೆಯೇ ಮೋಸ ಹೋದ ಕವಿ,

ಎ.ಜಿ ಭಟ್ಟರು, ಅಣ್ಣ ತಮ್ಮನಂತೆಯೂ, ತಮ್ಮ ಅಣ್ಣನಂತೆಯೂ ಕಾಣುವ ಜಾದೂ ಅದು ಹೇಗೆ ಸಾಧಿಸಿದಿರಿ ? ಎಂದು ವಿಸ್ಮಯಪಟ್ಟಿದ್ದುಂಟು.

ಒಮ್ಮೆ ರಾಯರು ಹೊನ್ನಾವರದಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಹೊರಟಾಗ, ನಂತರ ಹತ್ತಿದ ಸುವರ್ಣ ಶೆಟ್ಟರು, 'ಸಾಹುಕಾರರಿಗೆ ನಮಸ್ಕಾರ' ಎಂದು ಪಕ್ಕದ ಸೀಟಿನಲ್ಲಿ ಆರೂಢರಾದರು. ತನ್ನನ್ನು ತುಳಸು ಎಂದು ತಪ್ಪಾಗಿ ತಿಳಿದಿದ್ದಾರೆ, ಎಂದು ರಾಯರಿಗೆ ತಕ್ಷಣ ತಿಳಿದರೂ, ಅವರ ಪ್ರಶ್ನೆಗಳಿಗೆಲ್ಲ ಹೌದು, ಇಲ್ಲ ಎಂಬ ಉತ್ತರಗಳನ್ನು ಕೊಟ್ಟು ಜಾರಿಕೊಳ್ಳಲಾರಂಭಿಸಿದರು. ಮಳೆ, ಬೆಳೆ, ತೆಂಗು, ಅಡಿಕೆ, ಗೋಡಂಬಿಗಳ ಬೆಲೆಯ ಪರಾಮರ್ಶೆ ಮಾಡುವದರಲ್ಲಿ ಸಾಗರ ಬಂದು ಬಿಟ್ಟಿತು. 'ಬನ್ನಿ, ಸಾಹುಕಾರ್ರೇ ಒಂದಿಷ್ಟು ಚಾ ಕುಡ್ದು ಬರುವ' ಎಂದಾಗ, 'ಆವೇಳೆಯಲ್ಲಿ ಚಹ-ಕಾಫಿ ಕುಡಿಯುವ ಅಭ್ಯಾಸವಿಲ್ಲ' ಎಂದು ರಾಯರು ಜಾರಿಕೊಂಡರು. ಹೊಟ್ಟೆ ತುಂಬಿದಾಗ ಶೆಟ್ಟರ ಮಾತು ಚುರುಕಾದವು. "ಧನಿಗಳೇ, ಈ ವರ್ಷ ಮಗಳ ಮದುವೆ ಜಪ್ಪಿ ಹಾಕಬೇಕೆಂದಿರುವೆ. ತೋಟಗಾರ ಸೊಸಾಯಟಿಯಿಂದ ಹತ್ತು ಸಾವಿರ ಸಾಲ ಪಡೆಯಬಹುದು. ಅರ್ಬನ್ ಬ್ಯಾಂಕಿನಿಂದ ಹತ್ತು ಸಾವಿರ ಎತ್ತಬಹುದು. ನೀವು ಜವಳಿಯನ್ನು ಉದ್ದರಿಯಾಗಿ ಕೊಡುವ ಆಶ್ವಾಸನೆ ಕೊಟ್ಟರೆ ನೆಂಟಸ್ತಿಕೆ ನೋಡಲು ಪ್ರಾರಂಭಿಸಿಯೇ ಬಿಡುತ್ತೇನೆ" ಎಂಬ ಪ್ರಸ್ತಾಪ ಮುಗಿಸಿ ಆಶ್ವಾಸನೆಗೆ ರಾಯರತ್ತ ನೋಡಿದರು. ಪೇಚಿನಲ್ಲಿ ಸಿಲುಕಿದ ರಾಯರು, ನಾನು ತುಳಸಿ ದಾಸನಲ್ಲ, ಅವನ ಅಣ್ಣ, ಎಂದಾಗ ಅವನ ಕನಸುಗಳೆಲ್ಲ ನುಚ್ಚು ನೂರಾದವು. ಕ್ಷಣದಲ್ಲೇ ಬೇರೆ ಜಾಗಕ್ಕೆ ಸ್ಥಳಾಂತರಿಸಿದರು.

ರಾಯರ ಸ್ನೇಹಿತ-ಸಹಪಾಠಿ ನಕುಲನ ಸೋದರ ದೀನಾನಾಥ (ದಿನ್ನಾ)ಗೆ ಕೃಷ್ಣಾನಂದರ ಮೇಲೆ ಅಪಾರ ಪ್ರೀತಿ-ಗೌರವ. ಅಂತೆಯೇ ಊರಿಗೆ ಹೋದಾಗೊಮ್ಮೆ ಮಾತನಾಡಿಸದೇ ಇರುವದಿಲ್ಲ. ಒಂದು ಮಧ್ಯಾಹ್ನ ಅಂಗಡಿಗೆ ಹೊರಟ ತುಳಸುವನ್ನು ಚಪ್ಪಾಳೆ ತಟ್ಟಿ ನಿಲ್ಲಿಸಿದ್ದರಿಂದ ಅವನು ಬೆಚ್ಚಿ ಬಿದ್ದ. 'ಎಂದು ಊರಿಗೆ ಬಂದ್ಯೋ ಮಾರಾಯಾ, ಒಂದು ಕಾರ್ಡು

ಬರೆದರೆ ನಾನೇ ಬಸ್ ನಿಲ್ದಾಣಕ್ಕೆ ಬರುತ್ತಿದ್ದೆ. ನಕುಲನ ಪತ್ರ ಬಂದಿತ್ತೇ? ಈ ದಿನಗಳಲ್ಲಿ ಅವನ ಪತ್ರವೇ ಇಲ್ಲ.........." ಎನ್ನುತ್ತ ಹತ್ತಿರ ಬಂದಾಗ ಅವನ ಮಾತು ಗಕ್ಕನೆ ನಿಂತಿತು. "ಅರರೇ ! ಪ್ರತಿದಿನ ನೋಡುತ್ತಿರುವ ತುಳಸಿದಾಸನನ್ನು ದೊಡ್ಡಣ್ಣನೆಂದು ತಿಳಿದು ಹೇಗೆ ಮೋಸ ಹೋದೆ ಎನ್ನು ತ್ತಿದ್ದಾಗಲೇ "ಇದೇನು ನನಗೆ ಹೊಸದಲ್ಲ. ನಮ್ಮ ನಮ್ಮ ಹೆಂಡಂದಿರು ಸರಿಯಾಗಿ ಗುರುತಿಸಿದರೆ ಸಾಕು ಎಂಬ ಪರಿಸ್ಥಿತಿ ಉಂಟಾಗಿದೆ!" ಎಂದು ಉದ್ಗರಿಸಿ ಸದಾ ಗಗ್ಗಯ್ಯನ ಗಡಿಬಿಡಿಯ ತುಳಸು, ಹೊರಟೇ ಬಿಟ್ಟ.

ರಾಯರು ಹೊನ್ನಾವರಕ್ಕೆ ಹೊರಟಾಗೊಮ್ಮೆ ತನ್ನ ಬಾಲ್ಯದ ಗೆಳೆಯ ಕೇಶವ ತೇಲಂಗನ ಮಾವಿನಕುರ್ವೆಯ ತೋಟದ ಮನೆಗೆ ಭೇಟಿ ಕೊಡುವದು ವಾಡಿಕೆ. ಶರಾವತಿ ನದಿಯಲ್ಲಿ ನಡುಗಡ್ಡೆಯಾಗಿರುವ ಈ ಊರಿಗೆ ತಲುಪಲು ನಾವೆಯನ್ನೇ ಬಳಸಬೇಕು. ಅಬ್ಬರದ ಗಾಳಿಗೆ ಕುದುರೆಯಂತೆ ಓಡುವ ನಾವೆಯಲ್ಲಿ ಪಯಣಿಸುವದೆಂದರೆ ರಾಯರಿಗೆ ಬಲೇ ಇಷ್ಟ. ಮನೆಯ ಪರಿಸರವೆಲ್ಲ ತೆಂಗು-ಕೌಂಗುಗಳಿಂದ ಕಂಗೊಳಿಸುತ್ತದೆ. ಎದುರಿನಲ್ಲೇ ಶರಾವತಿ ನದಿ. ಕೈಯಲ್ಲಿ ಕ್ಯಾಮರಾ ಹಿಡಿದು ನದಿ ದಂಡೆಯಲ್ಲಿ ಕುಳಿತರೆಂದರೆ, ಅಲ್ಲಿಂದ ಏಳಲು ರಾಯರಿಗೆ ಮನಸ್ಸೇ ಬರುವುದಿಲ್ಲ. ಅಪರೂಪಕ್ಕೆ ಬರುವ ಗೆಳೆಯನಿಗೆ ಎಳೆನೀರು, ಅವಲಕ್ಕಿ-ಉಂಡಿ ಮೀನುವ್ಯಂಜನಗಳ ಸರಬರಾಜು ಇದ್ದೇ ಇರುತ್ತದೆ. ತೇಲಂಗನ ಪತ್ನಿ ಮಮತಾಮಯಿ ಇದ್ದಂತೆ ಉತ್ತಮ ಗೃಹಿಣಿಯೂ ಹೌದು. ಅಂತೆಯೇ ರಾಯರೊಂದಿಗೆ ಅವರಲ್ಲಿ ಹೋದಾಗ ಹಿಂದಿರುಗಿ ಬರಲು ಮನಸ್ಸೇ ಆಗುವುದಿಲ್ಲ. ನಮ್ಮ ಕುಟುಂಬದ ಒಂದು ಸಮಾರಂಭಕ್ಕೆ ನಮಗೆ ಹೋಗಲಾಗದಿದ್ದರೂ, ತೇಲಂಗ್ ದಂಪತಿಗಳು ಆಗ ಮಿಸಿದ್ದರು. ಎದುರಿಗೆ ಕಂಡ ತುಳಸೀದಾಸನನ್ನು ರಾಯರೆನ್ನುತ್ತ ಎಂದು ಭ್ರಮಿಸಿ, "ಈ ಬಾರಿ ನಮ್ಮಲ್ಲಿ ಬರಲೇ ಇಲ್ಲವಲ್ಲ ? ಬಡವರನ್ನು ಮರೆತಂತೆ ಇದೆ!" ಎಂದು ತೇಲಂಗರ ಪತ್ನಿ ಮೂದಲಿಸಿದಾಗ, "ನೀವೆಂದು ನನ್ನನ್ನು ಕರೆದಿರಿ ? ನಿಮ್ಮಲ್ಲಿ ಸ್ವಾಗತವಿದೆಯೆಂದು ತಿಳಿದಿರಲೇ ಇಲ್ಲ !" ತುಳಸು ನುಡಿದ. ತೇಲಂಗನು ಪತ್ನಿಯ ಕಿವಿಯಲ್ಲಿ, ಇವನು ಕೃಷ್ಣಾನಂದನ ತಮ್ಮ ಎಂದು ಉಸಿರಿದಾಗ ಆಕೆ ಪೆಚ್ಚಾದಳು.

ಅತ್ತೆಯವರು ಬಚ್ಚಲಿನಲ್ಲಿ ಜಾರಿಬಿದ್ದು ಪೆಟ್ಟಾಗಿ ಹಾಸಿಗೆ ಹಿಡಿದಿದ್ದಾರೆ. ಒಂದೇ ಸವನೆ ಅಣ್ಣನನ್ನು ನೆನೆಸಿಕೊಳ್ಳುತ್ತಿದ್ದಾರೆ, ಎಂದು ಉಮೇಶನ ಫೋನು ಬಂದಾಕ್ಷಣ ರಾಯರು ಹೊರಟೇಬಿಟ್ಟರು. ಆವರೆ ಅತ್ತೆಯವರು ಇವರ ಗುರುತು ಹಿಡಿಯಲಿಲ್ಲ "ಪಾಪ, ಅವನಿಗೆ ಅದೆಷ್ಟು ಕೆಲಸವೊ! ಅವನ ಶಾಲಾದಿನಗಳಲ್ಲಿ ನನಗೆ ಟ್ಯಾಫ್ಯಾಯ್ಡ್ ಆಗಿತ್ತು. ಹಗಲು-ರಾತ್ರಿ ನನ್ನ ಸೇವೆ ಮಾಡಿದ್ದ. ಈಗ ಅವನಿಗೆ ಸ್ವಲ್ಪವೂ ಬಿಡುವು ಇದ್ದರೆ ಬಂದೇ ಬರುತ್ತಿದ್ದ. ತುಳಸುವನ್ನು ತೋರಿಸಿ ಕೃಷ್ಣಾನಂದನೆಂದು ಘಟಾಯಿಸುತ್ತೀಯಾ? ಎಂದು ಸೊಸೆಯನ್ನು ತರಾಟೆಗೆ ತೆಗೆದುಕೊಂಡರು. ಇತರರು ರಾಯರನ್ನು ತೋರಿಸಿ, ನಿಮ್ಮ ಹಿರಿಯ ಮಗ ಬಂದಿದ್ದಾರೆ ಎಂದರೆ, ಇವನು ತುಳಸೀದಾಸನೆಂದು ಖಚಿತ ಪಡಿಸಲು ನಾನು ಸಾಕ್ಷಿ–ಪುರಾವೆ ನೀಡಬೇಕೇ? ಎಂದು ಬಾಯಿ ಮುಚ್ಚಿಸುತ್ತಿದ್ದರು. ರಾಯರು ಅಲ್ಲಿದ್ದಷ್ಟು ದಿನ ತಾಯಿಯ ಶುಶ್ರೂಷೆ ಮಾಡಿದ್ದನ್ನು ಆ ಚಿತ್ರಗುಪ್ತನು ಗಮನಿಸಿ ಮಾತೃಸೇವೆಯ ಪುಣ್ಯವನ್ನು ತುಳಸುವಿನ ಖಾತೆಗೇ ಜಮಾ ಮಾಡಿರಬೇಕು! ತಾಯಿಯಾದವಳು ಮಕ್ಕಳಲ್ಲಿ ಭೇದ ಮಾಡಲ್ಲವಲ್ಲವೇ?

ರಾಯರು ಕರಾವಳಿಯ ಕಾವಿ ಕಲೆಯನ್ನು ಆಳವಾಗಿ ಅಭ್ಯಸಿಸಿ, ಗ್ರಂಥವೊಂದನ್ನು ಬರೆದರು. ಅದನ್ನು ಪ್ರಕಟಿಸಿದ ಕರ್ನಾಟಕ ಲಲಿತ ಕಲಾ ಆಕಾಡೆಮಿಯವರಿಗೆ, ಅಳಿದುಳಿದ ಕಾವಿ ಚಿತ್ರಗಳನ್ನು ವೀಡಿಯೋದಲ್ಲಿ ಸೆರೆ ಹಿಡಿಯಬೇಕೆಂದು ಹಂಬಲು ಮಾಡಿ ಅವನ್ನೆಲ್ಲ ತೋರಿಸುವಂತೆ ಬಿನ್ನವಿಸಿಕೊಂಡರು. ಅದೇ ಕಾಲಕ್ಕೆ ಅಕಾಡೆಮಿಯವರು ಕಾರ್ಯಾಗಾರವೊಂದನ್ನು ಏರ್ಪಡಿಸಿದ್ದರಿಂದ ಹೊನ್ನಾವರದಲ್ಲಿ ಸರಕಾರಿ ಅಧಿಕಾರಿಗಳು, ಕಲಾಸಕ್ತರು, ರಾಜಕಾರಣಿಗಳು, ಆಕಾಡಮಿಯ ಕಾರ್ಯಕರ್ತರೆಲ್ಲ ನೆರೆದಿದ್ದರು. ಆ ಸಮಯದಲ್ಲಿ ಅಲ್ಲೇ ಇದ್ದರೂ ರಾಯರು, ಸಭೆ. ಸಮಾರಂಭ, ಜನ ಜಂಗುಳಿಯ ಒಡನಾಟ ಅವರ ಜಾಯಮಾನಕ್ಕೇ ಒಗ್ಗದ್ದರಿಂದ, ಕರೆಯಲು ಬಂದ ವಾಹನದಲ್ಲಿ ತನ್ನೊಂದಿಗೆ ಹಿಂದೆ ಕಾವಿ ಚಿತ್ರಗಳನ್ನು ಕಂಡುಹಿಡಿಯಲು ಓಡಾಡಿದ ತಮ್ಮ ಗಜಾನನನನ್ನು ಕಳುಹಿಸಿದರು, ವೀಡಿಯೋದವರಿಗೆ

ಸಹಾಯವಾಗಲಿ ಎಂದು. ಬೆಂಗಳೂರಿನವರು ಇಳಿದು ಕೊಂಡಲ್ಲಿ ವಾಹನ ನಿಂತಾಗ, ಉಚ್ಚ ಅಧಿಕಾರಿಯೋರ್ವರು ಬಂದು, ತಾವು ಕಾಮತರೇ ? ಎಂದು ವಿಚಾರಿಸಿದಾಗ ಹೌದೆಂದ ಗಜಾನನ್ನು ಸಂಭ್ರಮದಿಂದ ಸ್ವಾಗತಿಸಿದರು. ಸರಿ ಆತನೇ ಕೃಷ್ಣಾನಂದ ಕಾಮತರೆಂದು ನೆರೆದವರೆಲ್ಲ ನಮಸ್ಕರಿಸಿ ಪರಿಚಯ ಹೇಳಿಕೊಂಡರು. ಮಿತಭಾಷಿ ಗಜಾನು ಅವರನ್ನು ತಿದ್ದುವ ಗೋಜಿಗೆ ಹೋಗಲಿಲ್ಲ. ಯಾರೋ ಕಾಫಿ ತಂದು ಕೊಟ್ಟರು. ಹಲವರು ಹಸ್ತಲಾಘವ ಮಾಡಿದರು. ಅವರ್ಸಾದ ನಾಗೇಶ ಶಾನಭಾಗರ ಶಿಕ್ಷಕಿ ಸೊಸೆಗೆ, ಹಿಂದಿನ ಸಲ ತಮ್ಮ ಮನೆಗೆ ಬಂದ ಕೃಷ್ಣಾನಂದ ಕಾಮತರನ್ನು ಮಾತನಾಡಿಸಿ ಸತ್ಕರಿಸಿರಲಿಲ್ಲ, ಎಂಬ ಕೊರಗು ಇದ್ದೇ ಇತ್ತು. ಆದ್ದರಿಂದ ಈ ಬಾರಿ ಅಕಾಡೆಮಿಯವರು ಛಾಯಾಚಿತ್ರಕ್ಕೆ ಬರಲಿದ್ದಾರೆ, ಎಂಬ ಪತ್ರದಿಂದಲೇ ಪುಲಕಗೊಂಡಿದ್ದಳು. ಗಜಾನನ್ನು ಕಂಡು, ಕಾಮತರಲ್ಲವೇ ? ಎಂದು ಕೇಳಿದಾಗ ಗೋಣು ಹಾಕಿದವನಿಗೆ, "ನಿಮ್ಮ ಎಲ್ಲ ಪುಸ್ತಕಗಳನ್ನು ಓದಿದ್ದೇನಲ್ಲದೇ ಹಲವನ್ನು ಕೊಂಡು ಕೊಂಡಿದ್ದೇನೆ ಕೂಡಾ ! ನಮ್ಮ ಜಿಲ್ಲೆಯವರು ಇಷ್ಟೊಂದು ಪ್ರಭಾವ ಶಾಲಿಯಾಗಿ ಬರೆಯುತ್ತಾರೆ, ಎಂದರೆ ನಮಗೆಲ್ಲ ಅಭಿಮಾನ ಅಲ್ಲವೇ"? ಎಂದಾಗಲೂ ಗಜಾನು ಪ್ರತಿಕ್ರಿಯಿಸದೇ ಗೋಣು ಹಾಕಿದ್ದರಿಂದ ಬರವಣಿಗೆಯಲ್ಲಿ ವಾಚಾಳಿಯಾಗಿದ್ದರೂ ಮಾತಿನಲ್ಲಿ ಮಿತಭಾಷಿಯೇ ಸರಿ ಎಂಬ ತೀರ್ಮಾನಕ್ಕೆ ಬಂದಿರಬೇಕು ! ಅಕಾಡೆಮಿಯ ಕಾರ್ಯಾಗಾರದ ಸಮಾವೇಶ ಸಮಾರಂಭದಲ್ಲಿ ಶಾವಿಶಾಲೆಯ ಲೇಖಕರನ್ನು ಮುಖ್ಯ ಅತಿಥಿಯಾಗಿ ಬರಲಿದ್ದ ಮಂತ್ರಿ ಮಹೋದಯರಿಂದಯಾ ಮಲಾರ್ಪಣೆ ಮಾಡಿಸಬೇಕೆಂದು ಯೋಜಿಸಿದ್ದರು. ಕೊನೆಯ ನಿಮಿಷದಲ್ಲಿ ಗುಟ್ಟು ರಟ್ಟಾಗದಿರಲಿ, ಎಂದು ಉಪಾಯದಿಂದ ಗಜಾನು ಸಮಾರಂಭದಿಂದ ಕಣ್ಮರೆಯಾಗಿ ಬಿಟ್ಟ ! ಮುಂದೆ ಎಂದಾದರೂ ರಾಯರು ತಾನೇ ಕೃಷ್ಣಾನಂದ ಕಾಮತ, ಎಂದು ಸಾರಿಕೊಂಡರೂ ಅಂದಿನ ಹೊನ್ನಾಪರದ ಸಮಾರಂಭದಲ್ಲಿದ್ದ ಇತರರು ನಂಬದೇ ಇರುವ ಸಾಧ್ಯತೆಯೇ ಹೆಚ್ಚು !

ವಿಭಾಳ ಮದುವೆಯ ನಂತರ ಅತಿಥಿಗಳೆಲ್ಲ ಹೊರಟು ನಿಂತರು. ಕಾಮತ ಬಂಧು-ಭಗಿನಿಯರ ಬೃಹತ್ ಸಭೆ ಸೇರಿತು. ಗಜಾನು ಉಬ್ಬುತ್ತ

ನಡೆದ ಪ್ರಮಾಣದ ಬಗ್ಗೆ ಎಲ್ಲರೂ ಕಳವಳ ವ್ಯಕ್ತಪಡಿಸಿ, ಅವನು ತೂಕ ಕಡಿಮೆ ಮಾಡಿಕೊಳ್ಳಲೇ ಬೇಕು, ಎಂದು ಒತ್ತಾಯಿಸಿದರು. ವಿನೋದ ಪ್ರಿಯೆ ಮಾಲಿನಿ ಎದ್ದು ನಿಂತು, ನನಗೆ ಈಗ ನಮ್ಮ ಹಿರಿಯಣ್ಣನೇ ಈಗ ಎಲ್ಲರಿಗಿಂತ ಕಿರಿಯನಾಗಿ ತೋರುತ್ತಿದ್ದಾನೆ ಎಂದಾಗ ಎಲ್ಲರೂ ಚಪ್ಪಾಳೆ ತಟ್ಟಿದರು. ಇದರ ಶ್ರೇಯಸ್ಸನ್ನು ಪೂರ್ತಿಯಾಗಿ ನಾನೇ ಪಡೆಯಬೇಕೆಂದು, "ವೇಳೆ ವೇಳೆಗೆ ಮಿತವಾದ, ಆರೋಗ್ಯಕರ ಆಹಾರವನ್ನು ಪೂರೈಸುತ್ತಿರುವದೇ ಇದರ ಗುಟ್ಟು. ಉಳಿದವರೂ ಹೀಗೆಯೇ ಏಕೆ ಮಾಡಬಾರದು ? ಎಂದು ಘೋಷಿಸಿದೆ. ಆದರೆ ಅತ್ತೆಯವರು, "ಕೃಷ್ಣಾನಂದನು ಎಂದಿದ್ದರೂ ಮಿತಾ ಹಾರಿಯೇ ! ಅವನಿಗೆ ಅಜೀರ್ಣವಾದ ಒಂದೇ ಒಂದು ಸಂದರ್ಭ ನೆನಪಿಗೆ ಬರುತ್ತಿಲ್ಲ!" ಎಂದು ಬಾಯಿ ಮುಚ್ಚಿಸಿದರು. ಈಗ ಏಕರೂಪೀ ಬಂಧುಗಳನ್ನು ಹೇಗೆ ಬೇರ್ಪಡಿಸುವುದು ? ಎಂಬುದು ಸಭೆಯ ಮುಂದಿನ ಜಟಿಲ ಸಮಸ್ಯೆ. ಅದಕ್ಕೆ ರಾಯರೇ ಪರಿಹಾರ ಸೂಚಿಸಿದರು. ಪ್ರತಿಯೊಬ್ಬರೂ ತಮ್ಮ ಉಡುಪನ್ನು ಒಂದೇ ಬಣ್ಣಕ್ಕೆ ಸೀಮಿತಗೊಳಿಸಬೇಕು. ಶರ್ಟ ಪಾಯಜಾಮಾ, ಬನಿಯನ್, ಅಂಡರ್‌ವೇರ್ ಕೂಡ ಅದೇ ಬಣ್ಣದ್ದಾಗಿರ ಬೇಕು. ಗಜಾನು ಗಂಡಾಂತರ ರೇಖೆಯತ್ತ ಹೊರಟಿದ್ದರಿಂದ ಅವನಿಗೆ ಕೆಂಬಣ್ಣ ತುಳಸುವಿಗೆ ಹಸಿರು. ಉಮೇಶನಿಗೆ ಕಪ್ಪು ಬಣ್ಣ. ಉಳಿದ ಬಿಳೀ ಬಣ್ಣ ನನಗೆ ಮೀಸಲಿರಲಿ ! ಎಂದಾಗ ಎಲ್ಲರೂ ಖುಷಿಯಿಂದ ನಕ್ಕರು. ಉಳಿದ ಬಂಧುಗಳು ತಂತಮ್ಮ ಘೋಷಿತ ಬಣ್ಣ ಬಳಸುತ್ತಾರೋ ಇಲ್ಲವೋ ತಿಳಿಯದು. ಇವರು ಮಾತ್ರ ಶುಭ್ರ ಬಣ್ಣವನ್ನು ತಮ್ಮದನ್ನಾಗಿಸಿ ಕೊಂಡಿದ್ದಾರೆ.

# ಮೈಸೂರಿನ ನೆನಪುಗಳು




‘ಸರಕಾರದ ಸೇವೆಯೇ ಸಮಾಜದ ಸೇವೆ’ ಎಂದು ನಂಬಿಸಿದ ಆಕಾಶವಾಣಿ ಸೇರಿಕೊಂಡು ಧಾರವಾಡ, ಜಯಪುರ, ಕಲಕತ್ತಾಗಳಲ್ಲಿ ನೌಕರಿ ಮಾಡಿದ ನಂತರ ಪತಿ–ಪುತ್ರರು ವಾಸವಾಗಿದ್ದ ಬೆಂಗಳೂರಿಗೆ ಸಮೀಪವಿದ್ದ ಮೈಸೂರಿಗೆ ವರ್ಗ ಮಾಡಿದ್ದರಿಂದ ಹೊಸ ಚೈತನ್ಯ ಮೂಡಿತು. “ಮೈಸೂರು ಕೇಂದ್ರದ ಸ್ಥಾನಮಾನಕ್ಕೆ ಬಡ್ತಿ ಕೊಟ್ಟಿದ್ದಾರೇ !” ಎಂದು ಉತ್ಸಾಹದಿಂದ ಉದ್ಗರಿಸಿದಾಗ ನಮ್ಮ ರಾಯರು ಗೊಳ್ಳೆಂದು ನಕ್ಕರು. “ಇಷ್ಟು ವರ್ಷ ಸಹಾಯಕ ಕೇಂದ್ರ ಸಹಾಯಕ ನಿರ್ದೇಶಕಿ ಎಂದು ಇದ್ದವಳಿಗೆ ಬಡ್ತಿ ಕೊಟ್ಟು ಕೇಂದ್ರ ನಿರ್ದೇಶಕಿ ಎಂದು ಮೈಸೂರಿಗೆ ವರ್ಗ ಮಾಡಿದರೆ, ಅಲ್ಲಿಯ ಆಕಾಶವಾಣಿ ಕೇಳುಗರಿಗೆ ಏನು ಲಾಭವಾದಂತಾಯಿತು ? ನಿಮ್ಮ ಖಾತೆಯ ಅಧಿಕಾರಿಗಳ ಬುದ್ಧಿಯೇ ಇಷ್ಟು !” ಎಂದು ಮರುಗಿದರು. ಇಪ್ಪತ್ತು ನಿಮಿಷಕ್ಕೊಮ್ಮೆ ನಾನ್‌ಸ್ಟಾಪ್ ಬಸ್ ಇದ್ದುದರಿಂದ ‘ಬೆಂಗಳೂರಿನಲ್ಲಿದ್ದು ಪ್ರತಿದಿನ ಹೋಗಿ ಬರುವದನ್ನು ಮಾಡುತ್ತೇನೆ’ ಎಂದು ಹೇಳಿದಾಗ ತಲೆ

ಘಟ್ಟಿಸಿಕೊಂಡು, "ಮಹಾರಾಯ್ರೆ, ಹಾಜರಾಗಲು ಒಮ್ಮೆ ಹೋಗಿಬಂದರೇ ಎಲುವು ನುಗ್ಗಾಗುವಾಗ, ಮೂರು ವರ್ಷಗಳ ಕಾಲ, ಪ್ರತಿದಿನ ಹೋಗಿ ಬರುವ ಸಾಹಸ ತೋರಿದರೆ-ಪರಮವೀರ ಚಕ್ರ ಕೊಡಿಸಲು ಸಕಲ ಪ್ರಯತ್ನ ಮಾಡುವೆ" ಎಂದು ನನ್ನ ಉತ್ಸಾಹಕ್ಕೆ ನೀರೆರೆಚಿದರು. ಕೇಂದ್ರದ ಮುಖ್ಯಸ್ಥ ಯಾಗಿ ಹಾಗೆ ಮಾಡುವದೂ ಸಾಧ್ಯವಿರಲಿಲ್ಲವಾಗಿ ಮೈಸೂರಿನಲ್ಲಿ ಒಂಟಿ ಸಂಸಾರದ ಏರ್ಪಾಡು ಮಾಡಲೇಬೇಕಾಯಿತು.

ಬಸ್ ನಿಲ್ದಾಣದಲ್ಲಿ ಹೊರಗೆ ಸಾಲಾಗಿ ನಿಂತ ಆಟೋರಿಕ್ಷಾ ಒಂದರಲ್ಲಿ ಆರೂಢಳಾಗಿ ರೇಡಿಯೋ ಸ್ಟೇಶನ್ನಿಗೆ ಒಯ್ಯಲು ಹೇಳಿದೆ. ಆತ-"ರೈಲ್ವೆ ಸ್ಟೇಶನ್ನೊ? ಪೊಲೀಸ್ ಸ್ಟೇಶನ್ನೊ?" ಎಂದು ಮರುಸವಾಲು ಹಾಕಿದ. ಈ ಮಂಕು, ಇನ್ನೆಲ್ಲಾದರೂ ಒಯ್ದಾನು! ಎಂದು ಇನ್ನೊಂದು ಆಟೊ ಹತ್ತಿದೆ. ಅವನೂ ಗೊಂದಲದಲ್ಲಿ ಬಿದ್ದು ರೇಡಿಯೋ ಎಂದು ಏನೋ ನೆನಪಿಸಿ ಕೊಂಡು "ಆಕಾಶವಾಣೀನಾ!" ಎಂದಾಗ ಹೌದೆಂದೆ. "ಇಪ್ಪತ್ತು ರೂಪಾಯಿ ಆಗುತ್ತೆ!" ಎಂದ. ಅಷ್ಟು ದೂರವಿಲ್ಲವೆಂದು ಗೊತ್ತಿದ್ದ ನಾನು "ಮೀಟರ್ ಇದೆಯೇ?" ಎಂದು ಕಣ್ಣಾಡಿಸಿದೆ. ಅದು ಬುರಖಾ ಹಾಕಿಕೊಂಡಿತ್ತು! "ನೀವು ಊರಿಗೆ ಹೊಸಬರೆಂದು ಕಾಣುತ್ತೆ" ಎಂದು ಅರ್ಥಪೂರ್ಣವಾಗಿ ನಕ್ಕ. ನಾನು ಇಳಿದು ನಗರಬಸ್ ಸಾರಿಗೆಯ ಕಂಟ್ರೋಲ್ ಆಫೀಸಿನಲ್ಲಿ ಆಕಾಶವಾಣಿಗೆ ಹೋಗುವ ಬಸ್ ವಿಚಾರಿಸಿದೆ. "ಕಂಡಕ್ಟರ್‌ನನ್ನು ವಿಚಾರಿಸಿ" ಎಂದು ನಿರ್ಲಕ್ಷ್ಯದ ಉತ್ತರ ಸಿಕ್ಕಿತು. ಯಾರೋ ಪ್ರಯಾಣಿಕರು ಕರುಣೆಯಿಂದ "ನಗರ ಕೇಂದ್ರನಿಲ್ದಾಣ" ಎಂಬ ಹಣೆಪಟ್ಟಿಯ ಬಸ್ ತೋರಿಸಿದಾಗ ಕಕ್ಕಾವಿಕ್ಕಿಯಾದರೂ ಹತ್ತಿದೆ. ಪ್ರಯಾಣಿಕರಿಂದ ತುಂಬಿ ತುಳುಕುವ ಬಸ್ಸಿನಲ್ಲಿ ಆಕಾಶವಾಣಿ ಸ್ಟಾಪ್ ಇದೆ ಎಂದು ಖಾತ್ರಿ ಮಾಡಿಕೊಂಡೆ. ಕೊನೆ ನಿಮಿಷದವರೆಗೂ ಬಸ್ ಕಂಡಕ್ಟರ್‌ಬರದೇ, "ಇದೆ, ಆಕಾಶವಾಣಿ ಸ್ಟಾಪ್" ಎಂದು ಕೂಗಿದಾಗ ಒಂದು ರೂಪಾಯಿ ಪಡೆದು, ಟಿಕೆಟ್ ಚಿಲ್ಲರೆ ಎರಡೂ ಕೊಡದೇ 'ರಾಯಿಟ್' ಎಂದಾಗ ಕರ್ನಾಟಕ ರಾಜಧಾನಿ ಮತ್ತು ಸಾಂಸ್ಕೃತಿಕ ರಾಜಧಾನಿಗಳ ಸಾರಿಗೆ ವ್ಯವಸ್ಥೆ ಒಂದೇ ರೀತಿ ಯಾಗಿದೆ ಎಂದು ಅರಿಯುವಂತೆ ಆಯಿತು.

ವೀಳ್ಯ ಜಗಿಯುತ್ತ, ಅಸ್ತವ್ಯಸ್ತ ಸಮವಸ್ತ್ರ ತೊಟ್ಟ, ಡೊಳ್ಳು ಹೊಟ್ಟೆಯ, ಕೆಂಪು ಕಣ್ಣಿನ ಆಕಾಶವಾಣಿ ಕಾವಲುಗಾರ, ಸಶಸ್ತ್ರ ಕಾವಲುಗಾರರಿಬ್ಬರೂ ನಿರ್ಲಕ್ಷ್ಯದಿಂದ ನಿಂತಿದ್ದರೂ. ತಾಳ್ಮೆಯಿಂದ "ಒಳಗೆ ಹೋಗಬಹುದೇ ?" ಎಂದು ವಿಚಾರಿಸಿದೆ. "ಸಿಕ್ಕ ಸಿಕ್ಕವರನ್ನು ಒಳಗೆ ಬಿಡಲು ಇದೇನು ಜಾತ್ರೆನಾ ?" ಎಂದು ಕಾವಲುಗಾರ ಗುಡುಗಿದ. "ನಿರ್ದೇಶಕರನ್ನು ಕಾಣಬೇಕು" ಎಂದಾಗ—"ಇಲ್ಲಿ ಅವರಾರೂ ಇಲ್ಲದೆ ಯುಗಗಳೇ ಕಳೆದಿವೆ. ಇನ್ನಾರು ಬೇಕು ನನಗೇ ಹೇಳಿ !" ಎಂದಾಗ ನಗು ತಡೆದುಕೊಂಡು, ನೆನಪಾದ ಒಂದು ಹೆಸರು ಹೇಳಿ, "ಅವರನ್ನು ಕಾಣಬೇಕು" ಎಂದಾಗ ಮೆತ್ತಗಾಗಿ ಒಳಗೆ ಬಿಟ್ಟ.

ಸುಂದರವಾದ ಗುಲಾಬಿ ಬಣ್ಣದ ಕಟ್ಟಡವನ್ನು ಇಡಿಯಾಗಿ ಸುತ್ತು ಹಾಕಿದೆ. ಯಾರೂ, ಏನು ಬೇಕು ? ಎಂದು ಕೇಳಲೇ ಇಲ್ಲ. ಯಾಕೆ ಬಂದಿದ್ದೀರಿ ? ಎಂದು ವಿಚಾರಿಸುವ ತಾಪತ್ರಯವನ್ನೂ ತೆಗೆದುಕೊಳ್ಳಲಿಲ್ಲ. ಕಟಾ ಕಟ್ ಕಟ್, ಬೆರಳಚ್ಚಿನ ಸದ್ದು ಕೇಳುವಲ್ಲಿ ಹೋಗಿ ಇದು ಆಫೀಸಿನ ಕೋಣೆಯೇ ಎಂದು ಖಚಿತಪಡಿಸಿಕೊಂಡು ಒಳ ಹೊಕ್ಕು ಗುಮಾಸ್ತನಂತೆ ತೋರುತ್ತಿದ್ದ ವ್ಯಕ್ತಿಯ ಕೈಯಲ್ಲಿ ವರ್ಗಾ ವರ್ಗಿಯ ಆರ್ಡರ್ ಪ್ರತಿ ಕೊಟ್ಟಾಗ ಗಾಬರಿಯಿಂದ ತೊದಲಿದ. ಮುಖ್ಯ ಗುಮಾಸ್ತರಿಗೆ "ಸಾರ್, ಸಾರ್" ಎಂದಾಗ "ಅದೇನೋ !" ಎಂದು ದರ್ಪದಿಂದಲೇ ಬಂದವರಿಗೆ ಆ ಪತ್ರವನ್ನು ಮಾತಿಲ್ಲದೇ ಹಸ್ತಾಂತರಿಸಿದ. "ಹೊಸ ನಿರ್ದೇಶಕರು !" ಎಂದೊಡನೆ ಕಛೇರಿಯಲ್ಲಿ ವಿದ್ಯುತ್ ಸಂಚಾರವಾಯಿತು. ಏನು ಮಾಡಬೇಕೆಂದು ತಿಳಿಯದೇ ಕಂಗಾಲಾಗಿದ್ದರೂ ಮರುಕ್ಷಣ ಚೇತರಿಸಿಕೊಂಡು ಕುರ್ಚಿಯ ಧೂಳು ಜಾಡಿಸಿ ಕೂಡ್ರಲು ವಿನಂತಿ ಬಂದಿತು. ಇನ್ನೊಬ್ಬ ಓಡಿ ಹೋಗಿ ಮುಖ್ಯಸ್ಥರ ಕೋಣೆಯ ಬಾಗಿಲು ತೆಗೆದು ಸ್ವಚ್ಛತೆಯತ್ತ ಗಮನ ಹರಿಸಿದ. ಆಳೊಬ್ಬ ಕಾಫಿ ತರಲು ಕ್ಯಾಂಟೀನಿಗೆ ಧಾವಿಸಿದ. "ಮೇಡಂ, ಫೋನ್ ಮಾಡಿದರೆ ಗಾಡಿ ಕಳಿಸಬಹುದಿತ್ತು !" ಇನ್ನೊಬ್ಬಾತ ರಾಗ ಎಳೆದ. "ಅವೆಲ್ಲ ಔಪಚಾರಿಕತೆ ಬೇಡ ಕಣ್ರಿ. ಇದ್ದ ಸೌಲತ್ತುಗಳಲ್ಲೇ ಎಲ್ಲರೂ ದುಡಿದು ಮೈಸೂರು ಕೇಂದ್ರಕ್ಕೆ ಒಳ್ಳೆ ಹೆಸರು ತರೋಣ."

ಎಂದೆ. ಅಷ್ಟರಲ್ಲಿ, ಅಲ್ಲಿ ಕೆಲಸ ಮಾಡಿ ನಿವೃತ್ತರಾದ ಅಧಿಕಾರಿಣಿ ಕಾಣಿಸಿಕೊಂಡರು.

ಮೊದಲೇ ಪರಿಚಿತರಿದ್ದ ಅವರು ಮಾತಿಗಾರಂಭಿಸಿದರು, "ಮೈಸೂರು, ಬೆಂಗಳೂರಿಗಿಂತ ಚಿಕ್ಕ ಊರು. ಅಂತೆಯೇ ಅಲ್ಲಿಯಂತೆ ನಮ್ಮ ಮನಸ್ಸಿಗೆ ಬಂದಂತೆ ಇರುವಂತಿಲ್ಲ. ಇಲ್ಲಿ ಸ್ಥಾನ-ಮಾನ, ಅಂತಸ್ತು ಕಾಯ್ದುಕೊಂಡು ಹೋಗಬೇಕು. ಇಲ್ಲಿ ಕ್ಲಾರ್ಕುಗಳು ಕೂಡ ರೇಶಿಮೆ ಸೀರೆ ಉಡುವದರಿಂದ ಕೇಂದ್ರ ನಿರ್ದೇಶಕಿಯಾದವರು ಉತ್ತಮ ಬಟ್ಟೆ, ಬರೆ ಒಡವೆಗಳತ್ತ ವಿಶೇಷ ಲಕ್ಷ್ಯ ಹರಿಸಬೇಕು. ಇದರಿಂದ ಆಕಾಶವಾಣಿಗೇ ಶ್ರೇಯಸ್ಸು.... ಸದ್ಯಕ್ಕೆ ಧೀಮಂತರೆಲ್ಲ ನಮ್ಮ ಸಂಸ್ಥೆಗೆ ಬಹಿಷ್ಕಾರ ಹಾಕಿದ್ದಾರೆ. (ಆಗ ದಿಢೀರ್ ದೂರದರ್ಶನ ಪ್ರಸಾರ ಪ್ರಾರಂಭಿಸಿ ಕನ್ನಡೇತರ ಕಾರ್ಯಕ್ರಮಗಳನ್ನು ಕೊಡುತ್ತಿದ್ದುದರಿಂದ ಮೈಸೂರಿನ ಪ್ರಮುಖ ಬರಹಗಾರರೆಲ್ಲ ದೂರದರ್ಶನ-ಆಕಾಶವಾಣಿಗಳಿಗೆ ಬಹಿಷ್ಕಾರ ಹಾಕಿದ್ದರು) ಅವರನ್ನ ಉಪಾಯವಾಗಿ ಮಾತನಾಡಿಸಿ ಈ ಕೇಂದ್ರ ಅನೇಕ ಸಮಸ್ಯೆಗಳಿಂದ ನರಳುತ್ತಿದೆ" ಎಂದು ಹತ್ತಾರನ್ನು ವಿವರಿಸಿದರು.... ಹಿಂದೊಬ್ಬ ಉಚ್ಚ ಅಧಿಕಾರಿಯನ್ನು ನೇಮಿಸಿದಾಗ ಅವರು ಪ್ರಥಮ ದಿನವೇ ಪತ್ರಿಕಾಗೋಷ್ಠಿಯನ್ನು ಕರೆದಿದ್ದರು. ಹಲವಾರು ಕೊರತೆಗಳನ್ನು ಪತ್ರಿಕಾಕರ್ತರು ತೋರಿಸಿಕೊಟ್ಟಾಗ, "ಆರು ತಿಂಗಳ ಅವಕಾಶ ಕೊಡಿ, ಎಲ್ಲವನ್ನೂ ಸರಿಪಡಿಸುತ್ತೇನೆ," ಎಂದು ಆಶ್ವಾಸನೆ ಕೊಟ್ಟು ಮರುದಿನವೇ ಆರು ತಿಂಗಳ ರಜೆಗಾಗಿ ಅರ್ಜಿ ಸಲ್ಲಿಸಿ ಪರಾರಿಯಾಗಿದ್ದರು. ಆ ಅವಧಿಯನ್ನು ತಮಗೆ ಬೇಕಾದ ಊರಿಗೆ ವರ್ಗ ಮಾಡಿಸಿಕೊಳ್ಳಲು ಬಳಸಿದರು ಎಂದು ಸಹೋದ್ಯೋಗಿಯೊಬ್ಬರನ್ನು ನೆನಪಿಸಿಕೊಂಡರು.

ವಾಸದ ಮನೆಯ ಪ್ರಸ್ತಾಪ ಬಂದಾಗ, "ಇದು ಅರಮನೆಗಳ ಊರು. ಆದರೆ ಬಡವರೂ ಇರಬಹುದಾದ ತಾಣ. ಸೂರೊಂದು ಇರುವ ಪುಟ್ಟ ಕೋಣೆಯಾದರೂ ನಡೆಯುತ್ತದೆ" ಎಂದಾಗ, "ಮೇಡಂ ನಿಮಗೆ ಮೈಸೂರಿನ ಬವಣೆ ಗೊತ್ತಿಲ್ಲ. ಲಂಡನ್-ನ್ಯೂಯಾರ್ಕ್‌ಗಳಲ್ಲಿ ವಾಸ ಮಾಡಬಹುದು. ಈ ನಗರದಲ್ಲಿ ಬಾಡಿಗೆ ಮನೆ ಬಲು ಕಷ್ಟ! ಆದರೆ ಒಬ್ಬರೆ ಇರುವುದಾದರೆ ಯತ್ನಿಸಬಹುದು" ಎಂದು ರಾಗ ಎಳೆದರು. "ಇಲ್ಲಿಯೇ ಸಮೀಪದಲ್ಲಿ ವೀಣೆ

ಜಯಮ್ಮನವರು ವಾಸವಾಗಿದ್ದಾರೆ. ಅವರ ಮನೆಯಲ್ಲಿ ಕೋಣೆಯೊಂದನ್ನು ಬಾಡಿಗೆ ಕೊಡುತ್ತಾರೆಂದು ಕೇಳಿದ್ದೇನೆ" ಎಂದರು. ಕುತೂಹಲ, ಸಂತೋಷ ಗಳಿಂದ, "ಖ್ಯಾತ ಚರಿತ್ರಕಾರ, ಸಂಶೋಧಕ ಡಾ|| ಎಂ. ಎಚ್. ಕೃಷ್ಣರವರ ಮನೆಯವರಲ್ಲವೇ ? ಏರ್ಪಾಡು ಆದಂತೆಯೇ !" ಎಂದೆ.

ಜಯಮ್ಮನವರು ವೃದ್ಧಾಪ್ಯದಲ್ಲಿ ತಮಗೊಬ್ಬರಿಗೆಂದೇ ನಿರ್ಮಿಸಿ ಕೊಂಡ ಮಿನಿ ಮನೆ ವೈಶಿಷ್ಟ್ಯಪೂರ್ಣವಾಗಿತ್ತು. ಪ್ರಾಚೀನಕಾಲದ ಈಜಿಪ್ತ ದೊರೆಗಳು ಮರಣೋತ್ತರ ಜೀವನಕ್ಕಾಗಿ ನಿರ್ಮಿಸಿಕೊಳ್ಳುತ್ತಿದ್ದ ಭವ್ಯ ಪಿರಾಮಿಡ್ ಅಡಿಯ ಸೆಲ್‌ನಂತಹ, ಅಚ್ಚುಕಟ್ಟಾದ ಕಾಂಕ್ರಿಟ್ ಗುಹೆಯಾಗಿತ್ತು. ಸ್ವಯಂಪೂರ್ಣ ಒಬ್ಬರಿಗೆಂದೇ ನಿರ್ಮಿತ ಕಿರಿಕೋಣೆ, ಅತಿ ಕಿರಿದಾದ ಕಿಚನ್, ಅತ್ಯಂತ ಕಿರಿದಾದ ಟಾಯಲೆಟ್ ಇದ್ದ ಬಾತ್‌ರೂಂ. ಲತಾಂಗಿಯಾದ ಹೆಣ್ಣೊಬ್ಬಳೇ ಸಲೀಸಾಗಿ ಇರ ಬಹುದಾಗಿತ್ತು ಆದರೆ ನಾನು? ಅಡಿಗೆ ಮನೆ, ಬಚ್ಚಲಲ್ಲಿ ಕಾಲಿಟ್ಟರೆ, ಹಿಂಗಾಲಿನಲ್ಲಿಯೇ ಹೊರಬರಬೇಕಾಗಿತ್ತು. ಸ್ನಾನಕ್ಕೆ ಹನಿಹನಿಯಾಗಿ ಬಿಸಿ ನೀರು ಬಿಡುತ್ತಿದ್ದ ಪುಟಾಣಿ ಗೀಸರ್ ಕೂಡ ಅಲ್ಲಿತ್ತು. ಶತಕಗಳಿಂದ ಹಸಿದುಕೊಂಡಂತಿದ್ದ ಇರುವೆಗಳು ಏನಿದ್ದರೂ ಮುತ್ತಿತಿಂದು ಹಾಕುತ್ತಿದ್ದವು. ಸೊಳ್ಳೆಗಳು ಇರುವೆಗಳೊಂದಿಗೆ ಸೇರಿ ಮನುಷ್ಯರನ್ನು ಕಚ್ಚಿಡುತ್ತಿದ್ದವು. ಯಾರೇ ಬಂದರೂ ಹಾಸಿಗೆ ಸುರುಳಿ ಮಾಡಿ, ಕುರ್ಚಿ ಮಡಚಿಟ್ಟು ಬಾಗಿಲು ತೆರೆದು ಬರಮಾಡಿಕೊಳ್ಳಬೇಕಾಗಿತ್ತು – ವಿಶ್ರಾಂತಿ ಸಮಯದಲ್ಲಿ ವಕ್ಕರಿಸಿದರೆ. ಆರಿಸಿದ ದೀಪಗಳು ಇದ್ದಕ್ಕಿದ್ದ ಹಾಗೆ ಮಧ್ಯರಾತ್ರಿ ಉರಿಯ ಲಾರಂಭಿಸುತ್ತಿದ್ದವು. ಆದ್ದರಿಂದ ಬಲ್ಬ್ ತೆಗೆದಿಡಬೇಕಾಯಿತು. ಆಫೀಸಿಗೆ ಹತ್ತಿರವಿದ್ದದ್ದು ಹೆಚ್ಚಿನ ಅನುಕೂಲವಾಯಿತು.

ಒಂದು ದಿನ ಹೆಲ್ಮೆಟ್ ಹಾಕಿಕೊಂಡು ಕಾಂಪೌಂಡಿನಲ್ಲಿ ಓಡಾಡು ತ್ತಿದ್ದುದನ್ನು ನೋಡಿ ಖಿಲಾಡಿ ಸಹೋದ್ಯೋಗಿಯೊಬ್ಬ ಕೇಳಿಯೇ ಬಿಟ್ಟರು "ಸ್ಕೂಟರಿಲ್ಲದ ನೀವು ಮನೆಯಲ್ಲಿ ಹೆಲ್ಮೆಟ್ ಹಾಕುತ್ತೀರಾ ?" ನಾನು "ನೋಡಿ, ಕಾಂಪೌಂಡಿನಲ್ಲಿ ಸುತ್ತಲಿರುವ ತೆಂಗಿನ ಮರಗಳಲ್ಲಿ ಒಣಗಿದ ಕಾಯಿಗಳು ಒಂದೊಂದಾಗಿ ಬೀಳುತ್ತಲೇ ಇರುತ್ತವೆ. ಮೈಸೂರಿನಲ್ಲಿ ಮೂರು ತಿಂಗಳಿಗೊಮ್ಮೆ ಕಾಯಿ ಕೀಳಿಸುವ ಪರಿಪಾಠ ಇಲ್ಲವೆಂದು

ತೋರುತ್ತದೆ ! ನನ್ನ ತಲೆ, ಮೈಸೂರಿಗೆ ಬಂದ ತಪ್ಪಿಗೆ ಒಡೆದು ಹೋಗಬಾರದೆಂದು ಮುಂಜಾಗ್ರತೆ" ಎಂದಾಗ ಎಲ್ಲರೂ ನಕ್ಕರು.

ಆಕಾಶವಾಣಿಗೆ ಬಹಿಷ್ಕಾರ ಹಾಕಿದ ಧೀಮಂತರ ಮನ ಒಲಿಸುವುದು ಹೇಗೆ ? ಎಂದು ತುಂಬ ಯೋಚಿಸಿದೆ. ಕೊನೆಗೆ ಅವರೇ ಎಲ್ಲರೂ ಸೇರಿ ಹೊಸ ನಿರ್ದೇಶಕರನ್ನು ಭೇಟಿ ಮಾಡಲು ಬರುತ್ತಿರುವ ವಿಚಾರ ತಿಳಿದು ನೆಮ್ಮದಿಯಾಯಿತು. "ಬನ್ನಿ, ಬನ್ನಿ ಸಂತೋಷ" ಎಂದು ಸ್ವಾಗತಿಸಿದಾಗ, "ಓಹೋ ನಿಮಗೆ ಕನ್ನಡ ಬರುತ್ತದೆಯಲ್ಲ!" ಎಂದು ಸೋಜಿಗಪಟ್ಟರು ಮೊದಲನೆಯವರು. "ಕಾಮತ್ ಎಂದರೆ ಕರಾವಳಿ ಜಿಲ್ಲೆಯವರೇ ? ಕಾಮತ್ ಹೊಟೇಲ್ ಸಂಬಂಧಿಕರೇ?" ವಿಚಾರಿಸಿಕೊಂಡರು ಚಿಕಿತ್ಸಕ ಬುದ್ಧಿಯವರು. ನನ್ನ ಅಲ್ಪ ಪರಿಚಯ ಹೇಳಿ ನಾನು ಡಾ||ಕೃಷ್ಣಾನಂದ ಕಾಮತರ ಪತ್ನಿ, ಎಂದು ಸಾಹಿತ್ಯಿಕ ನಂಟನ್ನು ಹೇಳಿಕೊಂಡಾಗ ಎಲ್ಲರ ಹುಬ್ಬು ಏರಿದವು. ಆ ನಂತರವೂ ಬರುತ್ತಲೇ ಇದ್ದ ಸಾಹಿತಿಗಳಿಗೆ "ಇವರು ನಮ್ಮ ಕೃಷ್ಣಾನಂದ ಕಾಮತರ ಮನೆಯವರು" ಎಂದು ಹಿರಿಯ ಸಾಹಿತಿಗಳು ಪರಿಚಯಿಸಿದಾಗ ತಮಾಷೆಯೆನಿಸಿತ್ತು. ಯಾರೂ ನೋಡದ ಕಾಮತರು ಬರವಣಿಗೆಯಿಂದಲೇ ಅವರಿಗೆಲ್ಲ ಚಿರಪರಿಚಿತರಾಗಿದ್ದರು.

ಕಾರ್ಯಕ್ರಮಗಳ ಕುರಿತುನಾನು ಮಾತನಾಡುತ್ತಿದ್ದಂತೆ ಬಹಿಷ್ಕಾರದ ನಿರ್ಧಾರ ಕರಗಿ ಹೋಗಿತ್ತು. ನಂತರದ ದಿನಗಳಲ್ಲಿ ನನಗೆ ಅಲ್ಲಿ ದೊರೆತ ಸಾಹಿತಿ–ಕಲಾವಿದರ ಅಂತಃಕರಣದ ಸಹಕಾರ–ಮಮತೆ, ವಿಶ್ವಾಸಗಳನ್ನು ನೆನೆದಾಗ ಮನಸ್ಸು ತುಂಬಿಬರುತ್ತದೆ. ಆ ನಂತರ ಕುವೆಂಪುರವರಿಗೆ ವಂದಿಸಿ ಬರಲು ಹೋದೆ. ಅವರು ಆಕಾಶವಾಣಿಗೆ ಬರದೇ ದಶಕಗಳೇ ಸಂದಿದ್ದವು. ವಿಶ್ವಾಸದಿಂದ ಆಗಮಿಸಿ ಆಶೀರ್ವದಿಸಿದ್ದೇ ಅಲ್ಲದೇ ಮುಂದೆ ನಮಗಾಗಿ ಹಲವಾರು ಕಾರ್ಯಕ್ರಮಗಳನ್ನು ಮಾಡಿ ಕೊಟ್ಟರು. 'ವಿಶ್ವಮಾನವ ಸಂದೇಶ'ವನ್ನು ಸಮೂಹಗೀತದಲ್ಲಿ ಕೇಳಿ ಆನಂದಿಸಿದರು. ಮೈಸೂರು ಆಕಾಶವಾಣಿಯ ಚಿನ್ನದ ಹಬ್ಬದ ಸಂದರ್ಭದಲ್ಲಿ ಅವರು ವೇದಿಕೆಯ ಮೇಲೆ ಬಂದದ್ದು ಮಹತ್ವದ ಸನ್ನಿವೇಶ. ಏಕೆಂದರೆ ಐವತ್ತು ವರ್ಷಗಳ ಹಿಂದೆ

ಮೊಟ್ಟಮೊದಲ ಬಾರಿ ಮೈಸೂರು ಬಾನುಲಿ ಪ್ರಸಾರ, ಯುವಕವಿ ಕುವೆಂಪು ಅವರ ಕವಿತಾ ವಾಚನದಿಂದಲೇ ಪ್ರಾರಂಭವಾಗಿತ್ತು !

ಒಂದು ದಿನ ವಿ. ಎಸ್. ನಯಪಾಲರ ಭಾರತ ದರ್ಶನದ ಪುಸ್ತಕ ಓದುತ್ತ ಮೈಮರೆತಿದ್ದೆ. ಒಮ್ಮಿಂದೊಮ್ಮೆ ಬೂಟಿನ ಖಟ್, ಖಟ್ ಸಪ್ಪಳ ಮಾಡುತ್ತಾ ಪೊಲೀಸ್ ಪಡೆಯೊಂದು ನನ್ನ ಮಿನಿ ಮನೆಯೆದುರು ಪ್ರತ್ಯಕ್ಷ ವಾಯಿತು. ಬೆಚ್ಚಿಬಿದ್ದು ಹಾಗೇ ನೋಡುತ್ತ ನಿಂತೆ. "ಯಾರನ್ನು ಬಂದಿಸಲು ಬಂದಿದ್ದೀರಿ ? ಇಲ್ಲಿ ಯಾರೂ ಕಳ್ಳರು ವಾಸವಾಗಿಲ್ಲ" ಎಂದು ಧೈರ್ಯ ತಂದುಕೊಂಡು ಕಿರುಚಿದೆ. ಪಡೆಯ ಮುಖ್ಯಸ್ಥ ಬಂದು ಸಲಾಂ ಹೊಡೆದು, "ಮೇಡಂ, ನಮ್ಮ ಡಿ. ಐ. ಜಿ ಮತ್ತು ಎಸ್. ಪಿ. ಸಾಹೇಬರು ನಿಮಗೆ ಒಂದು ವಿನಂತಿ ಕಳಿಸಿದ್ದಾರೆ. ಕರ್ನಾಟಕ ಪೊಲೀಸರ ಶತ ವಾರ್ಷಿಕೋತ್ಸವಕ್ಕೆ ತಾವು ವಿಶೇಷ ಆಹ್ವಾನಿತರಾಗಿ ಬಂದು ನಾಲ್ಕು ಮಾತು ಹೇಳಬೇಕಂತೆ" ಎಂದು ನಮ್ರವಾಗಿ ಹೇಳಿದಾಗ ಜಗತ್ತು ಹೀಗೂ ಇದೆಯೇ ? ಎಂದು ಆಶ್ಚರ್ಯವಾಯಿತು. ಇನ್ಸ್‌ಪೆಕ್ಟರರು ತನ್ನನ್ನು ಪರಿಚಯಿಸಿ-ಕೊಂಡು "ತಾವು ಕೃಷ್ಣಾನಂದ ಕಾಮತರ ಪತ್ನಿ ಎಂದು ತಿಳಿದಾಗ ಆದ ಆನಂದ ಅಷ್ಟಿಷ್ಟಲ್ಲ. ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಅವರ ಪುಸ್ತಕಗಳನ್ನು ಓದುತ್ತಲೇ ಬೆಳೆದಿದ್ದೇನೆ. ಅವರನ್ನು ಭೇಟಿ ಮಾಡುವ ಭಾಗ್ಯ ಈವರೆಗೆ ಬಂದಿಲ್ಲ....ಈ ಸಮಾರಂಭಕ್ಕೆ ತಾವು ಆಗಮಿಸುವಂತಾದರೆ ಅವರು ಬಂದಷ್ಟೇ ಸಂತೋಷವಾಗುತ್ತದೆ !" ಎಂದು ಹೇಳಿದ ಮಾತನ್ನು ಒಪ್ಪದೇ ಇರಲು ಆಗಲೇ ಇಲ್ಲ. ತನ್ನ ಕೋರಿಕೆ ಮಾನ್ಯ ಮಾಡಿದ್ದಕ್ಕಾಗಿ ಇನ್ನೊಂದು ಸಲಾಂ ಹಾಕಿ ಹಿಂದಿರುಗಿದರು.

ದಿನಗಳೆದಂತೆ ಮೈಸೂರಿನ ಸಾಹಿತಿಗಳು, ಕಲಾವಿದರು, ಇತರ ಶ್ರೀಮಂತರು ಹೆಚ್ಚೆಚ್ಚು ಆತ್ಮೀಯರಾದರು. ಆರ್. ಕೆ. ನಾರಾಯಣರು ಆಗೀಗ ಬಂದು ಮಾತನಾಡಿಸಿ, ತಾವೇ ನೆಟ್ಟ ಅಶ್ವತ್ಥ ಗಿಡದ (ಈಗದು ದೊಡ್ಡ ಮರವಾಗಿದೆ.) ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದರು. ನನ್ನ ವಿನಂತಿಯ ಮೇರೆಗೆ ತಮ್ಮ ಸೋದರರ ಪ್ರಸಿದ್ಧ ವ್ಯಂಗ್ಯ ಚಿತ್ರಕಾರ

ಆರ್. ಕೆ. ಲಕ್ಷ್ಮಣ್ ಅವರನ್ನು ಆಕಾಶವಾಣಿಗೆ ಕರೆದುಕೊಂಡು ಬಂದು ಕನ್ನಡದಲ್ಲಿ ಭಾಷಣ ರಿಕಾರ್ಡ್ ಮಾಡಲು ಸಹಾಯ ಮಾಡಿದರು. ಹೋದ ಹೊಸದರಲ್ಲಿ ತ.ರಾ.ಸು. ಅವರನ್ನು ಕಂಡಾಗ ತಮ್ಮ ಸಾಹಿತ್ಯ ಜೀವನದ ಹಲವಾರು ನೆನಪುಗಳನ್ನು ಹೇಳಿದ್ದರು. ತಮ್ಮ ಒಂದು ಬಹುದಿನದ ಕನಸಾದ 'ಶಾಂತಲಾ' ಚಿತ್ರಕ್ಕೆ ಚಿತ್ರಕಥೆ ಬರೆದಿರುವದಾಗಿಯೂ ನಿರ್ಮಾಪಕರಿಗೆ ನನ್ನನ್ನು ಭೇಟಿ ಮಾಡಿ, ಸಮಕಾಲೀನ ವೇಷಭೂಷಣ, ಪರಿಕರಗಳ ಬಗ್ಗೆ ಸಲಹೆ ಪಡೆಯಲು ಹೇಳುವುದಾಗಿಯೂ ಉದ್ಗರಿಸಿದ್ದರು. ಅವರ ಕನಸು ಅವರೊಂದಿಗೇ ಕೊನೆಗೊಂಡಿತು. ನನ್ನ ಸಂಶೋಧನೆ–"ಮಧ್ಯಯುಗದ ಕನ್ನಡಿಗರ ಸಾಮಾಜಿಕ ಜೀವನ"ವನ್ನು ಅವರು ತುಂಬ ಮೆಚ್ಚಿಕೊಂಡಿದ್ದರು.

ಒಮ್ಮೆ ಎಸ್. ಎಲ್. ಭೈರಪ್ಪ ಮತ್ತು ಚದುರಂಗರು ಜೊತೆಯಾಗಿಯೇ ಆಕಾಶವಾಣಿಗೆ ಬಂದಾಗ ಛಾಯಾಚಿತ್ರಕ್ಕೆ ಒಪ್ಪಿಸಿದಾಗ, ಭೈರಪ್ಪನವರು, "ಬರೆಹ–ಛಾಯಾಚಿತ್ರಗಳಲ್ಲಿ ಕಾಮತರಂಥವರು ಅಪರೂಪ!" ಎಂದು ಉದ್ಗರಿಸಿದರು. ಚದುರಂಗರು, "ಯಾರನ್ನು ಕುರಿತು ಹೇಳುತ್ತೀರಿ?" ಎಂದು ಕೇಳಿದಾಗ–"ಕೃಷ್ಣಾನಂದ ಕಾಮತರ ಕೃತಿಗಳನ್ನು ಓದಿಲ್ಲವೆ?" ಎಂದು ಕೇಳಿದರು. "ಓದಿದ್ದೇನಲ್ಲ?" ಎಂದಾಗ, "ಅವರು ಈ ಮೇಡಂ ಯಜಮಾನರು!" ಎಂದು ಕೇಳಿ ಚದುರಂಗರಿಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. "ಈ ವಿಚಾರ ನನಗೆ ಹೇಳಿ ಇಲ್ವಲ್ಲಾ ತಾಯಿ?" ಎಂದು ಆಕ್ಷೇಪಿಸಿದರು.

ಆದಾಗಲೇ ಎರಡುವರ್ಷ ಜಾರಿಕೊಂಡರೂ ಯಜಮಾನರು ಒಮ್ಮೆಯೂ ಮೈಸೂರಿಗೆ ಬಾರದ್ದರಿಂದ ಗುಸು ಗುಸು ಮಾತಿಗೆ ಅವಕಾಶವಾಗಬಾರದೆಂದು ರಾಯರಿಗೆ ಬರಲು ಒತ್ತಾಯಿಸಿ ಮೈಸೂರಿನ ಆಕರ್ಷಣೆಗಳನ್ನು ಬಣ್ಣಿಸ ಲಾರಂಭಿಸಿದೆ. ಭಾರತದಲ್ಲೇ ಅಪೂರ್ವವಾದ ಅರಮನೆ ಇದೆ. ಮೈಸೂರು ಶೈಲಿಯ ಚಿತ್ರಸಂಗ್ರಹವಿದೆ. ಬೃಂದಾವನ ಇದೆ. ಕುಕ್ಕರಹಳ್ಳಿ ಕೆರೆ, ಹಲವಾರು ಪಾರ್ಕುಗಳಿವೆ. ಅಪೂರ್ವದ ಪ್ರಾಣಿ ಸಂಗ್ರಹಾಲಯ, ರಂಗನ-ತಿಟ್ಟು, ಬೆಳ್ಳೂರಿನ ಕೊಕ್ಕರೆಧಾಮ! ಎಂದೆಲ್ಲಾ ಆಮಿಷ ತೋರಿಸಿದೆ. ಇವುಗಳಲ್ಲಿ ಅವರು ಯಾವುದನ್ನು ಇಷ್ಟಪಟ್ಟರೆಂದು ಹೇಳುವದು ಕಷ್ಟ. ಹತ್ತಿರದ ಸಿ.ಎಫ್.ಟಿ.ಆರ್.ಐ. ಆವಾರದಲ್ಲಿ ಆಗಾಗ ಸುತ್ತಾಡಲು ಹೋಗು

ತ್ತಿದ್ದೆವು. ಅಲ್ಲಿಯ ಮರವೊಂದರ ಪೊಟರೆಯಲ್ಲಿ ತಾಯಿ ಗೂಗೆ–ಆದರ ಮರಿಗಳ ಚಿತ್ರ ಹಿಡಿಯುವದರಲ್ಲಿ ಯಶಸ್ವಿಯಾದರು. ಅಲ್ಲದೇ ಓಂಗಿಲಿ ಜೋಡಿಯೊಂದು ಆ ಮರದಿಂದ ಈ ಮರಕ್ಕೆ ಹಾರುತ್ತಲೇ ಇತ್ತು. ಹಕ್ಕಿಗಳ ಹಿಂದೆ ಅಲೆಯುವದು ನನ್ನ ಜಾಯಮಾನಕ್ಕೆ ಒಗ್ಗಿದಲ್ಲವಾದ್ದರಿಂದ, ಅಂದು ರವಿವಾರವಾದ್ದರಿಂದ ಅಭ್ಯಂಜನದ ನೆನಪಾಗಿ, ರಾಯರನ್ನು ಅಲ್ಲೇ ಬಿಟ್ಟು ನನ್ನ ಕುಟೀರಕ್ಕೆ ಧಾವಿಸಿದೆ. ಅಪ್ಪಣೆ ಇಲ್ಲದೇ ಒಳಗೆ ಬಂದು ಛಾಯಾಗ್ರಹಣ ಮಾಡಿದ ಅಪರಾಧಕ್ಕಾಗಿ ಸಂರಕ್ಷಣ ಅಧಿಕಾರಿಗಳು ಆಫೀಸಿಗೆ ಕರೆದೊಯ್ದು, ರಾಯರನ್ನು ಪ್ರಶ್ನಿಸಲಾರಂಭಿಸಿದ್ದರು. ಅಷ್ಟರಲ್ಲಿ ನಾನು ಅಲ್ಲಿ ತಲುಪಿ ಎಲ್ಲ ವನ್ನು ವಿವರಿಸಿದಾಗ, ಅಧಿಕಾರಿ ಕ್ಷಮೆಯಾಚಿಸಿ, ಸೆರೆ ಹಿಡಿದ ಛಾಯಾ ಚಿತ್ರಗಳಲ್ಲಿ ಒಂದೊಂದು ಪ್ರತಿ ಕೊಡುವಂತೆ ವಿನಂತಿಸಿಕೊಂಡರು. ಆದರೆ ರಾಯರು ಮುಚ್ಚಿದ ಕ್ಯಾಮರಾ ತಿರುಗಿ ತೆಗೆಯಲಿಲ್ಲ. ಮರುಬಸ್ಸಿಗೆ ಬೆಂಗಳೂರಿಗೆ ಹೊರಟೇ ಬಿಟ್ಟರು.

ಮೂರು ವರ್ಷದ ವಾಸ್ತವ್ಯದಲ್ಲಿ ಮೈಸೂರಿನೊಂದಿಗೆ ಗಾಢವಾದ ಮೈತ್ರಿ ಬೆಳೆದುಬಿಟ್ಟಿತ್ತು. ಅಲ್ಲಿಂದ ನನಗೆ ಮುಂಬೈಗೆ ವರ್ಗವಾಯಿತು. ಹೆಚ್ಚಿನ ಪರಿಚಿತರು ನೊಂದುಕೊಂಡರೂ ದೊಡ್ಡ ಕೇಂದ್ರಕ್ಕೆ ಹೊರಟಿದ್ದೇ ನೆಂದು ನೆಮ್ಮದಿ ತಂದುಕೊಳ್ಳಲು ಯತ್ನಿಸಿದರು. ಮೊದಲ ದಿನ ಒರಟಾಗಿ ನಡೆದುಕೊಂಡ ಕಾವಲುಗಾರ, ನಮಸ್ಕರಿಸಿ, "ಅಮ್ಮ, ನೀವು ದೊಡ್ಡವರು. ಬೇರೆಯವರಾಗಿದ್ದರೆ ನೌಕರಿಯೇ ಹೋಗುತ್ತಿತ್ತೊ ಏನೋ ? ನೀವು ನನ್ನನ್ನು ಕ್ಷಮಿಸಿದ್ದೆ ಅಲ್ಲದೆ ಬಡ್ತಿ ಬೇರೆ ಕೊಟ್ಟಿದ್ದೀರಿ !" ಎಂದಾಗ ಆವನ ಕಣ್ಣು ತೇವಗೊಂಡಿದ್ದವು.

○

# ಕ್ರಿಕೆಟ್ ಕಪ್ತಾನ



ಏಳು ಅಂತಸ್ತಿನ ಆಪಾರ್ಟಮೆಂಟುಗಳ ಬೃಹತ್ ಕಟ್ಟಡವಾದ 'ಶಶಿಕಿರಣ್'ದ ಹೊರಾಂಗಣದಲ್ಲಿ ಕೂಗುತ್ತ, ಚೀರುತ್ತ ಕ್ರಿಕೆಟ್ ಆಟದಲ್ಲಿ ಮೈಮರೆತ ಮಕ್ಕಳನ್ನು ವೀಕ್ಷಿಸುತ್ತ, 'ಅತ್ಯಂತ ಸುಸಂಸ್ಕೃತರೆನಿಸಿಕೊಂಡವರ ಮಕ್ಕಳೇ ಕಾಡಿನ ಕಗ್ಗರಂತೆ ವರ್ತಿಸಿದರೆ, ನಮ್ಮ ದೇಶಕ್ಕೆ ಏನಾದರೂ ಭವಿಷ್ಯವಿದೆಯೋ ?' ಎಂದು ಗೊಣಗಿದರು ರಾಯರು. ಅವರ ಈ ನಿರಾಸೆಗೆ ಕಾರಣ ಇಲ್ಲದಿರಲಿಲ್ಲ. ಅತ್ಯಾಧುನಿಕ ಕಟ್ಟಡದ ಕಿಡಕಿ ಬಾಗಿಲುಗಳನ್ನೆಲ್ಲ ಗಾಜುಗಳಿಂದಲೇ ಅಲಂಕರಿಸಿದ್ದರಿಂದ ಯಾವುದೇ ಚಂಡಿನಾಟ ಆಡಕೂಡದೆಂದು ಕಡ್ಡಾಯವನ್ನು ಹೇರಲಾಗಿತ್ತು. ಪಾರ್ಕ ಮಾಡಿದ ಕಾರಿನ ಗಾಜುಗಳೂ ಒಡೆಯುವ ಸಾಧ್ಯತೆ ಇದ್ದದ್ದು ಇನ್ನೊಂದು ಕಾರಣವಾಗಿತ್ತು.

ಆದರೆ ಮಾಡಕೂಡದು, ಎನ್ನುವದನ್ನು ಮಾಡಿದಾಗಲೇ ಮಕ್ಕಳಿಗೆ ಚಿತ್ತ ಶಾಂತಿ. ಅಂತೆಯೇ ರಜಾ ದಿನಗಳಲ್ಲಿ ಬಿಡುವಾದಾಗಲೆಲ್ಲ ಹುಡುಗರು ಸೇರಿ ಕ್ರಿಕೆಟ್ ಆಡುವದನ್ನು ರೂಢಿಸಿಕೊಂಡಿದ್ದರು. ಕಾವಲುಗಾರರು ಬೆನ್ನಟ್ಟಿ ಬಂದರೆ ಕ್ಷಣಾರ್ಧದಲ್ಲಿ ಕಣ್ಮರೆಯಾಗಿ, ಸ್ವಲ್ಪ ತಡೆದು ಮತ್ತೆ ಆಟ ಪ್ರಾರಂಭಿಸುತ್ತಿದ್ದರು. ಮೇಲ್ವಿಚಾರಕರ ಎಚ್ಚರಿಕೆಯ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಪಾಲಕರ ಹತ್ತಿರ ದೂರು ಒಯ್ದರೆ, ಪ್ರತಿಯೊಬ್ಬರೂ ತಮ್ಮ ಪುತ್ರ, ಅತ್ಯಂತ ಸಜ್ಜನ, ನಿಷ್ಠಾವಂತ ಯಾರ ಗೊಡವೆಗೂ ಹೋಗುವವನಲ್ಲ. ಇನ್ನಿತರರ ಮಕ್ಕಳೇ ಶುದ್ಧ ಪೋಲಿಗಳು! ಎಂದು ಸಾರಿ ಕೈ ತೊಳೆದುಕೊಂಡು ಬಿಡುತ್ತಿದ್ದರು. ಹೀಗಾಗಿ ಆಟಗಾರರ ಕೀಟಲೆಯಿಂದ ಹೇಗೆ ಪಾರಾಗುವದು ? ಎಂಬುದೇ ಸಕಲರ ಸಮಸ್ಯೆ ಯಾಗಿತ್ತು. ಆದರೆ ಉಳಿದವರಿಗಿಂತ ನಾವು ಸ್ವಲ್ಪ ಮಟ್ಟಿಗಾದರೂ ಅವರ ಚಟುವಟಿಕೆಗಳನ್ನು ನಿಯಂತ್ರಿಸುವ ಸ್ಥಿತಿಯಲ್ಲಿದ್ದೆವು. ನಮ್ಮ ಫ್ಲ್ಯಾಟು ಮೊದಲ ಮಹಡಿಯಲ್ಲಿತ್ತು. ಅವರಾಡುವ ಚೆಂಡು ಆಗಾಗ ನಮ್ಮ ಬಾಲ್ಕನಿಗೆ ಬಂದು ಸೇರಿಕೊಂಡು ಬಿಡುತ್ತಿತ್ತು. ಅದನ್ನು ಹಿಂದಿರುಗಿಸದಂತೆ ರಾಯರು ಎಷ್ಟೇ ಕಟ್ಟಪ್ಪಣೆ ಮಾಡಿದರೂ, ಮಕ್ಕಳು ಬಂದು ಅಂಗಲಾಚಿದಾಗ, ಹೆಂಗರುಳು ಕರಗದೇ ಇದ್ದೀತೆ ? ಅಲ್ಲದೇ ಇನ್ನೆಂದೂ ಇಲ್ಲಿ ಆಡುವದಿಲ್ಲ, ಎಂದು ಆಶ್ವಾಸನೆ ನೀಡಲು ಪುಟಾಣಿಗಳು ಎಂದೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಸರಿ, ಐದೇ ನಿಮಿಷದಲ್ಲಿ ಗಗನ ಭೇದಿಸುವ ಚೀತ್ಕಾರ ದಿಂದ ಆಟ ಮುಂದರಿಯುತ್ತಿತ್ತು. ಚೆಂಡು ಹಿಂದಿರುಗಿಸಿದ್ದಕ್ಕಾಗಿ ಹಂಗಿಸುವದು, ರಾಯರಿಗೆ ವಾಡಿಕೆಯಾಗಿ ಬಿಟ್ಟಿತ್ತು.

ಒಂದೆರಡು ಬಾರಿ ಹುಡುಗರು, ರಾಯರು ಮನೆಯಲ್ಲಿದ್ದಾಗ ಚೆಂಡು ಕೇಳಲು ಬಂದು ಚೆನ್ನಾಗಿ ಛೀಮಾರಿ ಹಾಕಿಸಿಕೊಂಡು ಮರಳಿದ್ದರಿಂದ ಚೆಂಡು ಬಾಲ್ಕನಿಯಲ್ಲಿ ಬಿದ್ದಾಗೆಲ್ಲ ಅವರು ಹೊರಗೆ ಹೊರಡುವದನ್ನೇ ಕಾದಿದ್ದು ನಂತರ ಬಂದು ನನ್ನನ್ನು ಚೆಂಡಿಗಾಗಿ ಕಾಡುತ್ತಿದ್ದರು. ಬೇಡುತ್ತಿದ್ದರು, ಪೀಡಿಸುತ್ತಿದ್ದರು. ಚೆಂಡನ್ನು ಮರಳಿ ಪಡೆಯಲು ಅವರು ಹೂಡುತ್ತಿದ್ದ ತಂತ್ರಗಳಿಗೆ ಕೊನೆ ಮೊದಲೇ ಇರುತ್ತಿರಲಿಲ್ಲ. ಒಮ್ಮೆ "ನಮಗೆ

ಸುಮ್ಮನಿರುವದೇ ಅಭ್ಯಾಸ! ಹೊರಗಿನ ಅಪರಿಚಿತ ಮಾಣಿ, ಬ್ಯಾಟನ್ನು ಕಸಿದುಕೊಂಡು ಸಿಕ್ಸರ್ ಬಾರಿಸಿಯೇ ಪಲಾಯನ ಮಾಡಿದ್ದಾನೆ ಅಂಟಿ," ಎನ್ನುತ್ತಾರೆ. ಇನ್ನೊಮ್ಮೆ ಒಂದೇ ಓಟಕ್ಕೆಂದು ಹೊಡೆದಿದ್ದೆವು, ಅದು ತಾನಾಗಿ ಬೌಂಡ್ರಿಗೆ ಜಿಗಿಯಿತು! ಎಂದು ಮನಗಾಣಿಸಲು ಯತ್ನಿಸುವರು. ಇನ್ನೂ ಚಿಕ್ಕ ಹುಡುಗನೊಮ್ಮೆ ಬಂದು, "ನಾನು ಶಶಿಕಿರಣ್‌ಗೆ ಹೊಸಬ ಅಂಟಿ, ಇಲ್ಲಿ ಕ್ರಿಕೆಟ್ ಆಟಕ್ಕೆ ನಿಷೇಧವಿರುವದು ತಿಳಿಯದು!" ಎಂದು ತರ್ಕ ಹೂಡುವನು. ಈ ಎಲ್ಲ ಕುಂಟು ನೆಪಗಳು ಹಳೆಯದಾದಾಗ ಬ್ಯಾಟನ್ನು ಎತ್ತಲೂ ಆಗದಷ್ಟು ಚಿಕ್ಕ ಮಗುವನ್ನು ಕಳಿಸಿ ತೊದಲು ನುಡಿಗಳಲ್ಲಿ ಅಂಟಿ, ಚೆಂಡು ಕೊಡಿಸಿ ದಮ್ಮಯ್ಯ, ಹೇಳಿಸುವರು, 'ನಮ್ಮ ಆಟದ ಆನಂದಕ್ಕೆ ಅಡ್ಡಗಾಲು ಹಾಕದಿರಿ ಪ್ರೀತಿಯ ಅಂಟಿ!' ಎಂದು ಕಿರಿಚಿಕೊಳ್ಳುವರು. ಪ್ರತಿ ಪ್ರಯತ್ನದಲ್ಲಿ ಅವರು ಗೆಲ್ಲುವದು, ನಾನು ಸೋಲುವದು ನಡೆದೇ ಇತ್ತು. ಹಿಂದಿರುಗಿ ಬಂದ ರಾಯರ ಪ್ರಥಮ ಪ್ರಶ್ನೆ ಚೆಂಡು ಎಲ್ಲಿ? ಉತ್ತರಿಸುವ ಮೊದಲೇ ಅವರ ವಾಗ್ಬಾಣಗಳು ಅಲ್ಲ, ವಾಕ್ ಚೆಂಡುಗಳು ನನ್ನ ಮುಖಕ್ಕೆ ಕಿವಿಗೆ ಅಪ್ಪಳಿಸಲಾರಂಭಿಸುವವು. "ಮಿತಸಂತಾನದ ಈ ದಿನಗಳಲ್ಲಿ ಬೇರೆಯವರಿಗೆ ಹಿಂಸೆ ಕೊಡಲೆಂದೇ ಈ ಶನಿ ಸಂತಾನ ಹುಟ್ಟಿ ಕೊಳ್ಳುತ್ತದೆ. ಭವಿಷ್ಯದ ಭಯೋತ್ಪಾದಕರು! ಅವರನ್ನು ಕೇಳಕೇಳುವವರು, ನಿಯಂತ್ರಿಸುವವರು. ಒಬ್ಬರಾದರೂ ಈ ಕಟ್ಟಡದಲ್ಲಿ ಇದ್ದಾರೆಯೇ? ಇಂದಿನಿಂದ ಈ ಜವಾಬ್ದಾರಿ ನಾನೇ ಹೊರುತ್ತೇನೆ ಯಶಸ್ವಿಯಾಗುತ್ತೇನೋ ಇಲ್ಲವೋ ನೀನೇ ನೋಡಿಯಂತೆ! ಎಂದು ಕೊನೆಗೊಮ್ಮೆ ಪಣ ತೊಟ್ಟರು.

ಪ್ರತಿ ಸಂಜೆ, ವಾರಾಂತ್ಯದಲ್ಲಿ ರಜಾದಿನಗಳಲ್ಲಿ ಆಟಗಾರರು ಸ್ಟಂಪ್, ಬ್ಯಾಟು, ಚೆಂಡುಗಳೊಡನೆ ಕೆಳಗಿಳಿದು ಬಂದು ಮಕ್ಕಳು ಆಡುವದನ್ನೆ ಕಾದು ನೋಡುವದು ರಾಯರಿಗೆ ಕೆಲಸವಾಯಿತು. ಖಿಡಕಿಯ ಹತ್ತಿರ ಕಾಲುಮಣೆ ಎಳೆದುಕೊಂಡು ಕಳ್ಳ ನೋಟದಿಂದ ಮಕ್ಕಳ ಕ್ರಿಕೆಟ್ ಆಟವನ್ನು ವೀಕ್ಷಿಸುವದು, ಅವರ ಪ್ರೀತಿಯ ಹವ್ಯಾಸವಾಗಿ ಬಿಟ್ಟಿತು. ಚೆಂಡು ನಮ್ಮ ಬಾಲ್ಕನಿಯಲ್ಲಿ ಜಿಗಿಯಿತೆಂದರೆ ಕಾಯೋರ್ನಮ್ಮುಖಿಯಾಗಿ ಬಿಡುವರು. ಅದು ನನ್ನ ಕೈಗೂ ಎಟುಕದಂತೆ ಎತ್ತರದ 'ಲಾಫ್ಟಿ'ಗೆ ಸೇರಿಸಿಬಿಡುವರು. ಚೆಂಡಿಗಾಗಿ ಕರೆಗಂಟೆ ಬಾರಿಸಿದವನನ್ನು, "ಈ ಹಿಂದೆ ಕಿಟಕಿ ಗಾಜಿಗೆ ಚೆಂಡು

ಅಪ್ಪಳಿಸಿ ಒಡೆದೆ. ಸದ್ಯ ನೂರೈವತ್ತು ರೂಪಾಯಿ ಪಾವತಿ ಮಾಡಿಸು
ನಂತರವೇ ಚೆಂಡಿನ ಕುರಿತು ನಿರ್ಧರಿಸೋಣ". ಎಂದಾಗ ಆಗಂತು
ಪುಟ್ಟನಿಗೆ ನವಾಜು ಮಾಡಲು ಹೋಗಿ ಮಸೀದೆ ಕೊರಳಿಗೆ ಬಿದ್ದ ಅನುಭ
ವಾಗಿ ಮರುಗುತ್ತ ಹಿಂದಿರುಗುವಂತಾಯಿತು. ಎಲ್ಲವನ್ನು ಬೇಕಾಬಿಟ್ಟಿ
ಕಬಳಿಸುವ ಆದಾಯಕರದ ಕಮಿಶನರ್ ಪತ್ನಿ, ಮಗನ ಪರವಾಗಿ ವಕಾಲತ್ತು
ವಹಿಸಿ ಚೆಂಡನ್ನು ಪಡೆದೇ ತೀರುವೆ, ಎಂದು ಬಂದವಳು, ಬಾರದಿದ್ದ
ಚೆನ್ನಾಗಿತ್ತು, ಅಂದುಕೊಳ್ಳುವಂತೆ ಮಂಗಳಾರತಿ ಮಾಡಿಸಿಕೊಂಡು
ಮರಳಿದಳು. "ಮಕ್ಕಳಿಂದ ಇತರರಿಗೆ ತೊಂದರೆಯಾಗದಂತೆ ನೋಡಿ
ಕೊಳ್ಳದೇ ಇರುವ ತಾಯಂದಿರಿಗೆ ಯಾವ ಜವಾಬ್ದಾರಿಯಿದೆ? ನಿನ್ನ ಮಗ
ಮಾತು ಕೇಳದಿದ್ದರೆ ರಿಮ್ಯಾಂಡ್ ಹೋಮಿಗೆ ಸೇರಿಸು. ನಾಲ್ಕೇಟು ಇತರ
ಕೈಯಿಂದ ತಿಂದಾಗಲೇ ಆವನಿಗೆ ಬುದ್ಧಿ ಬಂದೀತು! ಎಂದು ಈ ತಾಯಿಗ
ಬುದ್ಧಿವಾದ ಹೇಳಿದರು. ಈ ಘಟನೆ ಕಟ್ಟಡದಲ್ಲಿಯ ಇತರರೂ ಬುದ್ಧಿ
ಕಲಿಯುವಂತೆ ಮಾಡಿತು. ಚೆಂಡನ್ನು ಕೇಳಲು ಬರುವ ಎದೆಗಾರಿಕೆಯನ್ನು
ಯಾರೂ ತೋರಿಸಲಿಲ್ಲ. ಆದರೆ ನಮ್ಮ ಮನೆಯ ಕೆಳಗೆ ಆಡುವದನ್ನು
ಹುಡುಗರು ನಿಲ್ಲಿಸಲೂ ಇಲ್ಲ.

ರಾಯರ ಚೆಂಡಿನ ಸಂಗ್ರಹ ದಿನೇ ದಿನೇ ಬೆಳೆಯಲಾರಂಭಿಸಿತು
ಟೆನಿಸ್, ರಬ್ಬರ್ ಚೆಂಡುಗಳು, ಕೆಂಪು, ಹಸಿರು, ಹಳದಿ, ನೀಲಿ, ಬಣ್ಣದವ
ಗಳೆಲ್ಲ ಇದ್ದವು. ಚೆಂಡಿನಾಟದ ಸುಖ ಬಡವರ ಮಕ್ಕಳಿಗೂ ಸಿಗಲಿ, ಎಂದ
ರಾಯರು ಅವನ್ನು ಕಟ್ಟಡದ ಕಾರ್ಮಿಕರ ಮಕ್ಕಳಿಗೆ, ತರಕಾರಿ ಮಾರು
ಕುವವರಿಗೆ ಹಂಚಲಾರಂಭಿಸಿದರು. ಇದರಿಂದ ಈ ಮಕ್ಕಳು ರಾಯರ
ಚೆಂಡಿನ ಕಾರ್ಖಾನೆ ನಡೆಸುತ್ತಾರೆ! ಎಂದು ತಿಳಿದಿದ್ದರೆ, ಏನೂ
ಆಶ್ಚರ್ಯವಿಲ್ಲ.

'ಮಕ್ಕಳೊಂದಿಗೆ ವೈಮನಸ್ಸು ಬೆಳೆಸಿಕೊಳ್ಳುವದು ಜಾಣತನವಲ್ಲ
'ಎಂದು ರಾಯರ ಮನ ಒಲಿಸಲು ಯತ್ನಿಸಿದಾಗೊಮ್ಮೆ 'ನೀನು ಇದರಲ್ಲಿ ತಲೆ
ಹಾಕದಿರುವದೇ ಮೇಲು' ಎಂದು ತಮ್ಮ ಕೊನೆಯ ತೀರ್ಪನ್ನು ನೀಡುವರು
ಒಂದು ಸಂಜೆ ರಾಯರು ಹೊರ ಹೊರಟದ್ದನ್ನು ನೋಡಿ ಆಟಗಾರರ

ಆಗಮಿಸಿ, 'ಅಂಟಿ ನೀವೇ ನಮ್ಮ ರಕ್ಷಕರು. ನಾವು ಬೇರೆ ಬೇರೆ ತಾಣಗಳಲ್ಲಿ ಆಟ ಮುಂದುವರಿಸಲು ನೋಡಿ ಸೋತಿದ್ದೇವೆ. ಒಂದು ಕಡೆ ಮೇಲಿನಿಂದ ನೀರು ಸುರುವಿದರೆ, ಇನ್ನೊಂದು ಕಡೆ, ಕಸಕಡ್ಡಿಗಳನ್ನು ಚೆಲ್ಲುವರು, ಕೊಳೆತ ಟೊಮ್ಯಾಟೊ, ಮೊಟ್ಟೆಗಳನ್ನೂ ಎಸೆಯುವವರು ಇಲ್ಲದಿಲ್ಲ. ಅಂಕಲ್, ಎಷ್ಟೇ ಸಿಟ್ಟಿಗೆದ್ದರೂ ನೀವು ಇಂಥ ಯಾವ ತೊಂದರೆಯನ್ನು ಕೊಡಲಿಲ್ಲ. ಆಗಾಗ ನಮ್ಮ ಚೆಂಡುಗಳನ್ನು ಹಿಂದಿರುಗಿಸುತ್ತಿದ್ದರೆ, ಹಿಂದಿರುಗಿಸುವಂತೆ ನೀವು ಅಂಕಲ್‌ರ ಮನ ಒಲಿಸಿದರೆ ಜನ್ಮ ಜನ್ಮಾಂತರಗಳಲ್ಲಿ ನಾವೆಲ್ಲ ಋಣಿ ಯಾಗಿರುತ್ತೇವೆ.' ಎಂದು ತಮ್ಮ ಸಮಸ್ಯೆಗಳನ್ನು ತೋಡಿಕೊಂಡಾಗ, ಮನಸ್ಸು ಕರಗಿತು. 'ಮರುದಿನ ಸಂಜೆ ಬನ್ನಿ ಏನಾದರೂ ಉಪಾಯ ಮಾಡುತ್ತೇನೆ' ಎಂದಾಗ, ಕ್ರಿಕೆಟ್ ಮ್ಯಾಚ್‌ಗೆದ್ದವರಂತೆ ಹಿಪ್ ಹಿಪ್ ಹುರೇ ! ಹಾಕುತ್ತ ಮರಳಿದರು. ಈ ಸಮಸ್ಯೆಯನ್ನು ಶಾಶ್ವತವಾಗಿ ಪರಿಹರಿಸಲೇಬೇಕು, ಎಂದು ನಿರ್ಧರಿಸುತ್ತಿದ್ದಂತೆ, ಪರಿಹಾರೋಪಾಯ ಕುರಿತು ಚಿಂತಿಸತೊಡಗಿ ಕೊನೆಗೆ ಉಪಾಯ ಹೊಳೆದು ಪುಲಕಿತಳಾದೆ.

ವೈವಾಹಿಕ ಜೀವನದ ಹೊಸದರಲ್ಲಿ ರಾಯರು ತಮ್ಮ ಬಾಲ್ಯದ ನೆನಪು ಗಳನ್ನು ರಂಜಕವಾಗಿ ಹೇಳುತ್ತಿದ್ದುದು ನೆನಪಿಗೆ ಬಂದಿತು. 'ಆ ದಿನಗಳಲ್ಲಿ ಮಕ್ಕಳೂ ಮಾನವರು, ಅವರಿಗೂ ಆಸೆ–ಆಕಾಂಕ್ಷೆ ಆಟದ ಹಪಾಹಿ ಇದೆ ಯೆಂಬುದು ಹಿರಿಯರಿಗೆ ಹೊಳೆಯುತ್ತಲೇ ಇರಲಿಲ್ಲ. ಹೊಟ್ಟೆ ಬಟ್ಟೆ ಸ್ಕೂಲ ಫೀಸಿನ ಕಡೆಗಷ್ಟೆ ಗಮನ ಕೊಡುವವರು, ಅದೇ ಒಂದು ಮಹಾತ್ಯಾಗ ಅಂದುಕೊಳ್ಳುವವರು, ಕ್ರಿಕೆಟ್ ಆಟದ ಸಾಮಗ್ರಿ ಪೂರೈಸುವದು ಸಾಧ್ಯವೇ ಇರಲಿಲ್ಲ. ಇಷ್ಟಾದರೂ ಕ್ರಿಕೆಟ್ ಪಟುವಾಗಬೇಕೆಂಬ ಕನಸು ಎಳ್ಳಷ್ಟೂ ಕುಗ್ಗಿರಲಿಲ್ಲ. ಸ್ವಪರಿಶ್ರಮದಿಂದ ನನ್ನದೇ ಕ್ರಿಕೆಟ್ ಟೀಮನ್ನು ಕಟ್ಟಿ ಕೊಂಡಿದ್ದೆ....ಕೈಯಲ್ಲಿ ಬಿಡಿಗಾಸೂ ಇಲ್ಲದೇ ಇದನ್ನು ಹೇಗೆ ಸಾಧಿಸಿದಿರಿ ಎಂದು ನೀನು ವಿಸ್ಮಯ ಪಡುತ್ತಿರಬೇಕು. ಆ ದಿನಗಳಲ್ಲಿ ಜವಳಿ ಅಂಗಡಿ ಕಾರರು ಬನಿಯನ್, ಟೋಪಿ ಮುಂತಾದವನ್ನು ಗಟ್ಟಿಮುಟ್ಟಾದ ದೇವದಾರು ಕಟ್ಟಿಗೆಯ ಪೆಟ್ಟಿಗೆಗಳಲ್ಲಿ ತರಿಸುತ್ತಿದ್ದರು. ಅಂಥ ಪೆಟ್ಟಿಗೆಯ ದಪ್ಪ ಹಲಿಗೆ ಆರಿಸಿ, ಕತ್ತಿಯಿಂದ ಹಗಲು, ರಾತ್ರಿ ಕುಳಿತು ಕೆತ್ತಿ ಕೆತ್ತಿ ನುಣುಪು ಮಾಡಿ

ಒಂದು ರಾತ್ರಿ ಬ್ಯಾಟು ತಯಾರಿಸಿದ್ದೆ. ಹಿತ್ತಲಿನಲ್ಲಿ ಬೆಳೆದ ಪೇರಲ ವೃಕ್ಷ
ನೇರ ಟೊಂಗೆಗಳನ್ನು ಸ್ಟಂಪ್ ಮಾಡಿ ಪರಿವರ್ತಿಸಲಾಯಿತು. ಸಿಂಪಿಗಳ
ತಿರಸ್ಕರಿಸಿದ ಬಟ್ಟೆಯ ಚಿಂದಿಗಳನ್ನು ಅಪ್ಪನ ಹಳೇ ಧೋತರದ ತುಂಡಿ
ಸೇರಿಸಿ ಕೈ ಹೊಲಿಗೆ ಹಾಕಿದಾಗ ಚೆಂಡು ಸಿದ್ಧವಾಯಿತು. ಈ ಅಪೂರ್ವ
ಸಾಮಗ್ರಿಯುಳ್ಳ ಕ್ರಿಕೆಟ ಟೀಮಿಗೆ ಸೇರ್ಪಡೆಯಾಗಲು ಕಸಬಾ ಗಂಡು
ಮಕ್ಕಳ ಶಾಲೆಯ ವಿದ್ಯಾರ್ಥಿಗಳಲ್ಲಿ ಆದೆಂಥ ತುರುಸಿನ ಸ್ಪರ್ಧೆ ಅಂತೀಯಾ
ನನ್ನನ್ನು ಓಲೈಸುವವರಿಗೆ, ನನ್ನ ಮರ್ಜಿಕಾಯುವವರಿಗೆ ಮಾತ್ರ ಈ ಅಪೂರ್ವ
ಸುಸಂಧಿ ದೊರೆಯಿತು. ಪ್ರತಿದಿನವೂ ನಾನೇ ಪ್ರಥಮ ಆಟಗಾರ. ಬೌಂಡ್ರಿ
ಸಿಕ್ಸರ್ ಹೊಡೆಯಲು ಅನುವು ಮಾಡಿ ಕೊಡುವವರಿಗೆ ಮಾತ್ರ ಚೆಂಡು
ಹಾಕುವ ಅವಕಾಶ. ನನಗೆ ಮನಸ್ವೀ ಆಡಲು ಅವಕಾಶ ಮಾಡಿ ಕೊಡದಿದ್ದ
ಅಲ್ಲಿಗೆ ಆಟ ಮುಕ್ತಾಯ ! ಈ ಧೋರಣೆಯಿಂದಾಗಿ ಕಾಲೇಜ ಕ್ರಿಕೆಟ
ಟೀಮಿನಲ್ಲಿ ನನ್ನನ್ನು ಸೇರಿಸಿಕೊಳ್ಳದೇ ದೂರ ಇಟ್ಟಿದ್ದರು,...." ಎಂದು
ಗಹಗಹಿಸಿ ನಕ್ಕರು.

ಮರುದಿನ ಸಂಜೆ ಆಗಮಿಸಿದ ಮರಿ ಆಟಗಾರರಿಗೆ ಒಂದೊಂದು
ಧಾರವಾಡ ಫೇಡಾ ಕೊಟ್ಟೆ. ಚಪ್ಪರಿಸಿ ಸವಿಯುತ್ತ 'ಥ್ಯಾಂಕ್ಸ್ ಆಂಟಿ
ಎಂದು ಒಕ್ಕೊರಳಿನಿಂದ ಕೂಗಿದವು. 'ನೋಡಿ ಪುಟಾಣಿಗಳೇ ! ಶಾಲಾ ದಿ
ಗಳಲ್ಲಿ ನಿಮ್ಮ ಅಂಕಲ್, ಒಳ್ಳೆ ಕ್ರಿಕೆಟ್ ಆಟಗಾರರಾಗಿದ್ದರು. ಅವರನ್ನ
ನಿಮ್ಮ ತಂಡದ ಮುಖ್ಯಸ್ಥರನ್ನಾಗಿ ಆರಿಸಿದರೆ ನಿಮ್ಮ ಸಮಸ್ಯೆಗಳೆಲ್ಲ ತನ್ನಿಂ
ತಾನೇ ಬಗೆ ಹರಿಯುತ್ತವೆ.' ಎಂದು ಕಿವಿ ಮಾತು ಹೇಳಿದಾಗ, ಹಾಗೆ
ಮಾಡುತ್ತೇವೆ ಆಂಟಿ ಎಂದು ಚೀರುತ್ತ ಕಪಿಸೇನೆ ಹೊರಟಿತು. ಪೇ
ಯಿಂದ ಹಿಂದಿರುಗುತ್ತಿದ್ದ ರಾಯರನ್ನು ಗೇಟಿನಲ್ಲಿಯೇ ಇದುರುಗೊಂಡು
'ಹಲೋ ಅಂಕಲ್' ! ಎಂದರೂ ರಾಯರು ಅವರನ್ನು ಅಲಕ್ಷಿಸಿ ಮುಂದುವ
ದಾಗ ಅವರನ್ನು ಘೊರಾವ್ ಮಾಡಿ, 'ನಮ್ಮದೊಂದು ಕೋರಿಕೆ ಇದೆ
ಅದನ್ನು ನೀವು ಮಾನ್ಯ ಮಾಡಲೇಬೇಕು ಎಂದು ಒತ್ತಾಯಿಸಿದಾಗ
"ಚೆಂಡು ಹಿಂದಿರುಗಿಸುವದನ್ನು ಬಿಟ್ಟು, ಬೇರ ಬೇಡಿಕೆ ಮಾನ್ಯ ......
ಎನ್ನುತ್ತಿದ್ದಂತೆ. ಇಂದಿನಿಂದ ಅಂಕಲ್ ನಮ ತಂಡದ ಮುಖ್ಯಸ್ಥರು ಎಂದು

ಅನಂತ್ ಸಾರುತ್ತಿದ್ದಂತೆ ಎಲ್ಲರೂ ಒಕ್ಕೊರಲಿನಿಂದ 'ಬೆಚಿಯರ್' ಕೂಗಿದರು. ಈ ಒಂದು ಘಟನೆಯಿಂದ ರಾಯರ ದೈನಂದಿನ ಜೀವನದಲ್ಲಿ ಬಂದ ಪರಿವರ್ತನೆ ಅಷ್ಟಿಷ್ಟೆಂದು ಹೇಳಲಾಗದು. "ಸರಕಾರದ ಸೇವೆಯಲ್ಲಿದ್ದರೆ ಈಗ ನಿವೃತ್ತನಾಗುತ್ತಿದ್ದೆ...."ಎಂದು ತಮ್ಮ ಇಳಿ ವಯಸ್ಸಿನತ್ತ ಬೆಟ್ಟು ಮಾಡಿ ತೋರಿಸುತ್ತಿದ್ದವರು, ನಿಲುಗನ್ನಡಿಯಲ್ಲಿ ನೋಡಿ ಮೀಸೆಯ ನೆರೆ ಕೂದಲು ಕತ್ತರಿಸಿದರು. ತಲೆಯ ಕೂದಲು ಮುಕ್ಕಾಲು ಉದುರಿದರೂ ಉಳಿದವು ಕಪ್ಪಾಗಿಯೇ ಇದ್ದವು. ತನಗೀಗ ಎಷ್ಟು ವಯಸ್ಸು? ಎಂದು ನೆರೆಮನೆಯ ಗೌರಿಗೆ ಕೇಳಿದರು. ಅವಳು ಮೂವತ್ತು ಎಂದಾಗ ಗೆಲುವಾದರು. ಅವಳಿಗೆ ಮೂರು ವರ್ಷಗಳು. ಅಂಕಲ್ ತನಗಿಂತ ಹತ್ತು ಪಟ್ಟು ವಯಸ್ಸಾದರೂ ತುಂಬಾ ಭಾರಿ ಅನಿಸಿರಬೇಕು !

ಸದಾಕಾಲ ಹಣ ಜಮಾ ಮಾಡುವವರು ಇಂದಿನ ದಿನಗಳಲ್ಲಿ ಒಂದೇ ಸವನೆ ಹಿಂದೆಗೆದು ಕೊಳ್ಳಲಾರಂಭಿಸಿದ್ದರಿಂದ ದೀರ್ಘ ಪರಿಚಯದ ಬ್ಯಾಂಕ್ ಅಧಿಕಾರಿಗಳು, ನನಗೆ ಫೋನು ಮಾಡಿ ರಾಯರಲ್ಲಾದ ಬದಲಾವಣೆಯನ್ನು ಸೂಕ್ಷ್ಮವಾಗಿ ವಿವರಿಸಿದರು. ಕಾಲು ನಡಿಗೆಯಲ್ಲಿ ಅಚಲ ವಿಶ್ವಾಸವಿಟ್ಟವರು. ಆಟೋ ಹತ್ತಿ ಸ್ಪೋರ್ಟ್ಸ್-ಸ್ಟೋರ್‌ಗೆ ಮೇಲಿಂದ ಮೇಲೆ ಹೋಗಲಾರಂಭಿಸಿದರು. ಬಿಸಿಲಲ್ಲಿ ಆಡಲು ಮೇಲ್ದರ್ಜೆಯ ಹ್ಯಾಟು, ಕೈಗೆ ನೋವಾಗದಂತೆ ಗ್ಲೌವ್ಸ್, ಕಾಲಿಗೆ ಚೆಂಡು ಅಪ್ಪಳಿಸಿದಂತೆ ಪ್ಯಾಡು, ಕ್ಯಾನವಾಸ್ ಶೂಗಳನ್ನು ಕೊಂಡು ತಂದರು. ಅವನ್ನು ಧರಿಸಿ ಕ್ಯಾಮರಾದಿಂದ ಹತ್ತಾರು 'ಪೋಸ್' ಕ್ಲಿಕ್ಕಿಸಿಕೊಂಡರು. ಅದರ ಫೋಟೋ ಪ್ರಿಂಟ್‌ಗಳನ್ನು ತೆಗೆದು ಆಪ್ತ-ಬಂಧು-ಮಿತ್ರರಿಗೆಲ್ಲ ಪ್ರತಿಗಳನ್ನು ಅಂಚೆಯಿಂದ ಕಳಿಸಿದಾಗಲೇ ಸಮಾಧಾನ ಅವರಿಗೆ. ಅವನ್ನು ಪಡೆದವರೆಲ್ಲ ರಾಯರಿಗೆ ಅರವತ್ತಕ್ಕೆ ಮೊದಲೇ ಅರಳು ಮರಳು, ಎಂಬ ನಿರ್ಧಾರಕ್ಕೆ ಬಂದಿರಬೇಕು. ನನ್ನ ಸತ್ವಹೀನ ಅಡಿಗೆಯಿಂದ ಕ್ರಿಕೆಟ್ ಆಡಲು ಶಕ್ತಿ ಸಾಲದು, ಎಂದೂ ಹಾರ್ಲಿಕ್ಸ್ ಬಾದಾಮಿ ಹಾಲು, ಕೊಂಪ್ಲಾನ್‌ಗಳ ಸೇವನೆ ಪ್ರಾರಂಭಿಸಿದರು. ಪ್ರತಿದಿನ 3 ಲೀಟರ್ ಹಾಲು ಕೊಡಲು ಹಾಲಿನವನಿಗೆ ಅಪ್ಪಣೆಯಿತ್ತರು. ರಾತ್ರಿ ಕಡಲೆ ನೆನೆಹಾಕಿ ಬೆಳಗೆದ್ದು ಅದನ್ನು ಮೊಲುಕಾಡಿಸಿ, ನಿಕ್ಕರ್-ಬನಿಯನ್‌ಗಳಲ್ಲಿ ಜಾಗಿಂಗ್

ಹೋಗುವರು. ಹಿಂದಿರುಗಿ ಬಂದು ಉತಾಬಸ್ ತೆಗೆದು ಡಬಲ್ ಆಮ್ಲೆಟ್. ಕಾರ್ನ್‌ಫ್ಲೇಕ್, ಟೋಸ್ಟ ಎರಡು ಲೋಟ ಹಸುವಿನ ಹಾಲುಗಳ ಬಿಮ್ಮಗಿನ ನಾಶ್ತಾ ಮುಗಿಸುವರು. ನಂತರ ಸೇಬೊಂದನ್ನು ಉದರಕ್ಕೆ ಇಳಿಸುವರು. ನನಗೂ ಆರೋಗ್ಯ ಸುಧಾರಣೆಗೆ ಇದೇ ಡಾಯಟ್‌ದ ಸಲಹೆ ಇತ್ತರು ! ಮನೆಯ ಒಂದು ಬೆಡ್‌ರೂಂ, ಆಟದ ಎಲ್ಲಾ ಸಾಮಗ್ರಿಯನ್ನು ಹೊಂದಿ ಕ್ರಿಕೆಟ್ ರೂಂ ಆಯಿತು. ಗೋಡೆಗಳ ಮೇಲೆಲ್ಲ ಅವರ ಕಾಲದ ಹೀರೋ ಗಳಾದ ಸಿ. ಕೆ. ನಾಯಡು, ಜಾಮನಗರದ ನವಾಬ, ದೇವಧರ, ಮರ್ಚಂಟರ ಚಿತ್ರಗಳು ಹೊರಬಾಗಿಲಿಗಿದ್ದ ನಾಮ ಫಲಕವನ್ನು **ಕ್ರಿಕೆಟ್-ಕಾಮತ್** ಎಂದು ಪರಿವರ್ತಿಸಿಕೊಂಡರು.

ರಾಯರಿಗಿದ್ದ ಸ್ವಾತಂತ್ರ್ಯ ಕ್ರಿಕೆಟ್ ಸಾಮಗ್ರಿಗಳ ವಿಪುಲತೆ, ಬೇರಾರಿಗೂ ಇದ್ದಿಲ್ಲವಾಗಿ, ಅವರಿಗೆ ಬೇಕು ಎನಿಸಿದಾಗ ಆಟದ ಮೈದಾನಿನಲ್ಲಿ ಇಳಿಯಲಾಗುತ್ತಿರಲಿಲ್ಲ. ಅಂತೆಯೇ ಕಪ್ತಾನರು ಕೈಯಲ್ಲಿ ಕಾಲ್ಪನಿಕ ಬ್ಯಾಟು ಹಿಡಿದಿದ್ದೇನೆಂದು ಭಾವಿಸಿ, ಕಾಲ್ಪನಿಕವಾಗಿ ಪುಟಿಯುವ ಚೆಂಡನ್ನು ಆರು ಓಟಗಳಿಗಾಗಿ ಬಿಗಿದು ಹೊಡೆಯುವ ದೃಶ್ಯ ಮೋಜಿನದಾಗಿರುತ್ತಿತ್ತು. ನಾನು ಕೊಂಚವಾದರೂ ಈ ಆಟದಲ್ಲಿ ಆಸಕ್ತಿ ವಹಿಸಿದ್ದರೆ ನನ್ನನ್ನೂ ಕಲ್ಪನೆಯ ಟೀಮಿಗೆ ಸೇರಿಸುತ್ತಿದ್ದರೋ ಏನೋ ! ಹುಡುಗರು ಬರುವ ತನಕ ಕಾದು ಬೇಸತ್ತು, “ಈ ಅತ್ಯಾಧುನಿಕ ತಂದೆ-ತಾಯಿಗಳಿಗೆ ಮಕ್ಕಳ ಬೇಕು-ಬೇಡ ಗಳನ್ನು ಅರ್ಥ ಮಾಡಿಕೊಳ್ಳುವ ಯೋಗ್ಯತೆಯಿಲ್ಲ. ಇಡೀ ರಾತ್ರಿ ಮಲಗಿ ಹಸಿದ ಮಕ್ಕಳಿಗೆ ಸೂರ್ಯೋದಯದ ಹೊತ್ತಿಗೆ ನಾಶ್ತಾ ಕೂಡ ಮಾಡಿದರೆ ಇವರ ಮಹಾ ಗಂಟೇನು ಹೋಗುತ್ತದೆ ? ಈಗಲೇ ಹಾಲು-ನಾಶ್ತಾ ಕೊಟ್ಟಿದ್ದರೆ ಬಿಸಿಲಿಗೆ ಕಾವೇರುವ ತನಕ ಆಡಬಹುದಿತ್ತು.” ಎಂದು ಗೊಣಗು ವರು. ರಾತ್ರಿ ಬಹಳ ಹೊತ್ತು ಟಿ. ವಿ. ನೋಡಿ ಮಲಗುವ ತಾಯಂದಿರಿಗೆ ಎಚ್ಚರವಾಗಲಿಕ್ಕೇ 7 ಗಂಟೆಯಾಗಿ ಹೋಗಿರುತ್ತದೆ, ಎಂಬುದನ್ನು ರಾಯರು ಮರೆತಂತೆ ಇತ್ತು. “ದಿನಂ ಪ್ರತಿ ಎಲ್ಲ ಮಕ್ಕಳಿಗೆ ನಾಶ್ತಾದ ವ್ಯವಸ್ಥೆ ನಮ್ಮಲ್ಲಿಯೇ ಮಾಡಿದರೆ ಹೇಗೆ ? ಎಂದು ನನ್ನೊಡನೆ ಚರ್ಚಿಸಿದರು. “ಅವರು ನಿಮ್ಮ ಸಮಯಕ್ಕೆ ಸರಿಯಾಗಿ ಎದ್ದು ಬರಬೇಕಲ್ಲ !” ಎಂದು ಹೆಚ್ಚಿನ

ಜನಾಬ್ದಾರಿಯಿಂದ ತಪ್ಪಿಸಿಕೊಂಡೆ. ವೇಳೆ ಕಳೆಯುವದೇ ದುಸ್ತರವಾದಾಗ ಸುಣ್ಣದ ಬುಟ್ಟಿ ಹೊತ್ತು ತಂದು ಕ್ರಿಜ್, ಪಿಚ್, ಬೌಂಡರಿಗಳನ್ನು ಇನ್ನೊಮ್ಮೆ ಗುರುತು ಹಾಕಿದರು. ಅಂಕಲ್ ತಮಗಾಗಿ ಕಾಯುತ್ತಿದ್ದಾರೆಂದು ಬಾಲಕರೆಲ್ಲ ಸ್ಯಾಂಡ್ ವಿಚ್, ಇಡ್ಲಿ ತುಂಡುಗಳನ್ನು ಮುಲು ಕಾಡಿಸುತ್ತಲೇ ಆಟದ ಬೈಲಿಗೆ ಓಡೋಡಿ ಬರುವುದನ್ನು ಕಂಡಾಗ ಅಯ್ಯೋ ಪಾಪ! ಎನಿಸುತ್ತಿತ್ತು. ಇನ್ನಿತರ ಆಟಗಾರರಿಗಾಗಿ ಕಾಯುತ್ತಿರುವಾಗ, ಬಂದವರಿಗೆ, ಕೇವಲ ಓಟಗಳನ್ನು ಗಳಿಸಿ ಜಯಭೇರಿ ಹೊಡೆಯುವುದು ಮುಖ್ಯವಲ್ಲ. ಒಳ್ಳೆಯ ರೀತಿಯಿಂದ ಆಡಿದರೆ ಮಾತ್ರ ಆಟಕ್ಕೊಂದು ಗೌರವ, ಎಂದು ಉಪದೇಶಿಸುವರು. ಹೇಗೆ ನಿಲ್ಲಬೇಕು, ಬ್ಯಾಟ್ ಹೇಗೆ ಹಿಡಿಯಬೇಕು, ಬೀಸಬೇಕು ಎಂದು ಹೇಳಿಕೊಡಲಾರಂಭಿಸಿದರು. ಜೊತೆಗೆ ಚೆಂಡು ಹಾಕುವವನ ಪಾತ್ರ ಎಷ್ಟು ಮುಖ್ಯವಾದದ್ದು ಎಂದೆಲ್ಲ ಹೇಳಿ ಕೊಟ್ಟರು. ಮಕ್ಕಳಿಗೆಲ್ಲ ಅಂಕಲ್, ದೊಡ್ಡ ಹೀರೋ ಆಗಿಬಿಟ್ಟರು!

ರಾಯರ ಕ್ರಿಕೆಟ್ ಆಟಕ್ಕೆ ಎರಡೂ ಪಂಗಡಗಳಿಗೆ ಬೇಕಾಗುವ ಇಪ್ಪತ್ತೆರಡು ಆಟಗಾರರು ಸಿಕ್ಕ ದಾಖಲೆಯೇ ಇಲ್ಲ. ಒಬ್ಬನು ಟ್ಯೂಶನ್ನಿಗೆ ಸೇರಿಕೊಂಡರೆ, ಮತ್ತೊಬ್ಬನು ಊರಿಗೆ ಹೋಗಿರುತ್ತಾನೆ. ಮಗುದೊಬ್ಬನಿಗೆ ಜ್ವರ. ಅಂತೆಯೇ ಎಂಟು ಹತ್ತು ಆಟಗಾರರನ್ನು ಎರಡು ಟೀಮುಗಳಲ್ಲಿ ವಿಭಜಿಸುವದು ಕಷ್ಟಕ್ಕಿಟ್ಟುಕೊಳ್ಳುತ್ತಿತ್ತು. ರಾಯರು ನಾಲ್ಕು ಆಟಗಾರರಿಗೆ ಸಮ, ಎಂದು ಸರ್ವಾನುಮತದಿಂದ ಒಪ್ಪಿಕೊಳ್ಳಲಾಯಿತು. ಆದ್ದರಿಂದ ಅವರನ್ನು ಆಹುತಿ ತೆಗೆದುಕೊಂಡರೆ ನಾಲ್ಕು ವಿಕೆಟ್ ಡೌನ್ ಆದಂತೆ ಆಗುವದೆಂದು, ಅವರಿದ್ದ ಪಕ್ಷಕ್ಕೆ ಮೊದಲು ಬ್ಯಾಟಿಂಗ್ ಕೊಟ್ಟು ಆಟ ಪ್ರಾರಂಭಿಸಬೇಕಾಗಿ ಬರುತ್ತಿತ್ತು. ಕಿಲಾಡಿ ಮಕ್ಕಳು, ಮೊದಲ ಚೆಂಡಿನಿಂದ ಆರು ಓಟ ಬಾರಿಸುವಂತೆ ಮಾಡಿ ದ್ವಿತೀಯ ಚೆಂಡಿಗೆ ಮೂರೂ ಸ್ಟಂಪ್‌ಗಳು ಗಾಳಿಯಲ್ಲಿ ಹಾರಿ ಹೋಗುವಂತೆ ಮಾಡುತಿದ್ದರು. ಹೀಗಾದಾಗೊಮ್ಮೆ ಮಕ್ಕಳ ಹಾರಾಟ, ಕೂಗಾಟ, ಚೀರಾಟ, ಓಡಾಟಗಳನ್ನು ನೋಡಿಯೇ ಅನುಭವಿಸಬೇಕು. ಕಾಮತರ ಕ್ರಿಕೆಟ್ ಕಪ್ತಾನತನದಲ್ಲಿ ಆಟ

ಗಾರರಲ್ಲಿ ಹೊಸ ಹುರುಪು ಕಾಣಿಸಿಕೊಂಡದ್ದರಿಂದ, ಚೆಂಡು ಬಾಲ್ಕನಿಯಲ್ಲಿ ಬಂದು ಬೀಳುವದರಲ್ಲಿ ಗಣನೀಯ ಹೆಚ್ಚಳವಾಯಿತು. ಪ್ರತಿಸಲ ಚೆಂಡು ಕೇಳಲು ಬಂದವರಿಗೆ, ಗಾಜಿಗೆ ಚೆಂಡು ಬಡಿದದ್ದರಿಂದ ಒಡೆದು ನೂರೈವತ್ತು ರೂಪಾಯಿಗೆ ಹೊಸ ಗಾಜು ಹಾಕಿಸಬೇಕಾಯಿತು. ಈಗ ಆ ದಂಡತೆತ್ತು ಚೆಂಡನ್ನು ಪಡೆಯಿರಿ, ಎಂದು ರಾಯರ ಮಾತುಗಳನ್ನೆ ಪುನರುಚ್ಚರಿಸಿದೆ.

ಆದರೆ ಆ ಪಾತ್ರ ನಡೆಯಲಿಲ್ಲ. ಆಂಟಿಯ ಹೃದಯ ಗೆಲ್ಲುವದು ಹೇಗೆ ? ಎಂದು ರಾಯರೇ ಪುಟಾಣಿಗಳಿಗೆ ಹೇಳಿ ಕೊಟ್ಟರು. ಮಾತಿನಿಂದ ಕೆಲಸವಾಗದಿದ್ದರೆ ಹೋಗಿ ಅವರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಬಿಡಿ ಚೆಂಡು ಹಿಂದಿರುಗಿಸುವ ತನಕ ಮಿಸುಕಾಡಬೇಡಿ ! ಎಂದು ಬುದ್ಧಿವಾದ ಹೇಳಿಕೊಟ್ಟಿದ್ದರು. ರಾಯರು ಇಡೀ ದಿನ ಕ್ರಿಕೆಟ್ ಕುರಿತೇ ಮಾತನಾಡು ವರು. 'ಅರುಣನಿಗೆ ಸರಿಯಾದ ತರಬೇತಿ ಕೊಟ್ಟರೆ, ಅವನು ವಾಡೇಕರ ನಂತೆ ದಕ್ಷ ಕಪ್ತಾನನಾಗಬಲ್ಲ. ಪ್ರದೀಪನಿಗೆ ಸುನೀಲ ಗಾವಸ್ಕರನಂತೆ ಓಟ ಗಳಿಸುವ ಪ್ರತಿಭೆ ಇದೆ. ದೀಪುವಿಗೆ ಕಪಿಲದೇವನ ಸರ್ವತೋಮುಖ ಪ್ರತಿಭೆ ಇದೆ. ಅನಂತುವಿಗೆ, ಶಚಿನ್ ತೆಂಡುಲ್‌ಕರನ ಮೇರೆಯಿಲ್ಲದ ಆತ್ಮ ವಿಶ್ವಾಸ ವಿದೆ..........'ಎಂದೆಲ್ಲ ವಿವರಿಸುತ್ತಿರುವರು.

ಶಾರೀರಿಕ ಮತ್ತು ಮಾನಸಿಕವಾಗಿ ರಾಯರು ದಿನಂಪ್ರತಿ ಎಳೆಯವ ರಾಗುವದು ಕಂಡು ವಿಸ್ಮಯ ಪಟ್ಟೆ. ಅಡಿಗೆ ಹೇಗಿದ್ದರೂ ಎರಡೂ ಹೊತ್ತು ಹೊಟ್ಟೆ ತುಂಬ ಊಟ ಮಾಡಲಾರಂಭಿಸಿದರು. ದೈಹಿಕ ತೊಂದರೆಗಳು ಹೇಳಹೆಸರಿಲ್ಲದೇ ಮಾಯವಾದವು. ರಾತ್ರೆ ಒಂಭತ್ತು ಗಂಟೆಗೇ ಸುಖನಿದ್ರೆಗೆ ಹಂಬಲಿಸಿದರು. ಒಮ್ಮೆ ಮಲಗಿದರೆ ಎಚ್ಚರಗೊಳ್ಳುವುದು ಬೆಳಗಿನ ಐದಕ್ಕೆ ಇಳಿವಯಸ್ಸು ನನ್ನ ಮೇಲೂ ಪ್ರಭಾವ ಬೀರಲಾರಂಭಿಸಿದ್ದರಿಂದ ನಾನೂ ಕ್ರಿಕೆಟ್ ತಂಡದಲ್ಲಿ ಸೇರ್ಪಡೆಯಾಗಲು ನಿರ್ಧರಿಸಿದೆ. ಆದರೆ ಬ್ಯಾಟನ್ನು ಸರಿ ಯಾಗಿ ಹಿಡಿಯಲು ಬಾರದವಳು ಬೌಂಡರಿ ಬಾರಿಸುವುದು ಹೇಗೆ ? ಅಂತೆಯೇ ಚೆಂಡಿನ ಹಿಂದೆ ಓಡಿ ಸಂಗ್ರಹಿಸುವ ಕೆಲಸ ಒಪ್ಪಿಕೊಂಡೆ. ಆದರೆ 4-6 ವಯಸ್ಸಿನ ಹುಡುಗಿಯರು ಇದಾಗಲೇ ಆ ಕೆಲಸ ಮಾಡುತ್ತಿದ್ದರಿಂದ

ಅವರೊಡನೆ ಸ್ಪರ್ಧೆಗೆ ಇಳಿಯದೇ ಬೇರೆ ಮಾರ್ಗವೇ ಇರಲಿಲ್ಲ. ಇದರಿಂದಾಗಿ ನನ್ನನ್ನು ಆಕ್ರಮಿಸಲು ಒಂದು ವರ್ಷದಿಂದ ಯತ್ನಿಸುತಿದ್ದ ಸಂಧಿವಾತ, ಹೇಳ ಹೆಸರಿಲ್ಲದೇ ಮಾಯವಾಯಿತು. ಶಶಿಕಿರಣದ ಎದುರಿನಿಂದ ಹಾದು ಹೋಗುವ ದಾರಿಹೋಕರಿಗೆ, ಪುಟಾಣಿಗಳೊಂದಿಗೆ ಒಂದಾಗಿ ಬೆರೆತು. ಕ್ರಿಕೆಟ್ ಆಡುವ ಇಳಿವಯಸ್ಸಿನ ದಂಪತಿಗಳು ಆಸಕ್ತಿಯ ವಸ್ತುವಾಗಿ ಕಂಡರು. ಅಂತೆಯೇ ಒಂದೆರಡು ನಿಮಿಷ ನಿಂತಾದರೂ ನೋಡಿ ನಕ್ಕು ಮುಂದುವರಿಯುವರು.

ನಮ್ಮ ಚಟುವಟಿಕೆಗಳು ಮಲ್ಲೇಶ್ವರಂದಲ್ಲಿ ಮನೆಮಾತಾಗಿ ಪರಿಣಮಿಸಿದವು. ವೃತ್ತಪತ್ರಿಕೆಯೊಂದು "ಭಲೆ ಜೋಡಿ!" ಗಾಗಿ ನಮ್ಮನ್ನು ಪೀಡಿಸಿತು. ಆಕಾಶವಾಣಿಯವರು ಫೋನ್‌ಮಾಡಿ ತಮ್ಮ ಧ್ವನಿಮುದ್ರಣ ಪರಿಣತರನ್ನು ಕಳಿಸುತ್ತೇವೆಂದು ಹೆದರಿಸಲಾರಂಭಿಸಿದರು. ದೂರದರ್ಶನದವರು ವೀಡಿಯೊದಲ್ಲಿ ನಮ್ಮ ಆಟವನ್ನು ಸೆರೆ ಹಿಡಿಯದೇ ಬಿಡುವದಿಲ್ಲವೆಂದು ಪಟ್ಟು ಹಿಡಿದರು. ಆದರೆ 'ಪ್ರಸಿದ್ಧಿ-ಪರಾಙ್ಮುಖ' ಎಂಬ ಬಿರುದು ಪಡೆದಿದ್ದ ರಾಯರು, ಈ ಎಲ್ಲ ಆಮಂತ್ರಣಗಳನ್ನು ತಿರಸ್ಕರಿಸಿ ಇಂಥದಕ್ಕೆ ಮನಸೋತರೆ ತಮ್ಮ ಕ್ರಿಕೆಟ್ ಆಟ ಕೊನೆಯುಸಿರು ಬಿಡುವದರಲ್ಲಿ ಸಂದೇಹವೇ ಇಲ್ಲವೆಂದು ಪಟ್ಟು ಹಿಡಿದದ್ದರಿಂದ, ನಂತರ ಯಾರೂ ಇತ್ತ ಸುಳಿಯದೇ ನಮ್ಮಷ್ಟಕ್ಕೆ ನಾವು ಆಡಿಕೊಂಡು ಇರುವಂತೆ ಆಯಿತು.

ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದ ಆಟಪಾಠ ಇಲಾಖೆಯವರು ಕೊಂಚ ಧನಸಹಾಯ ಮಾಡುತ್ತೇವೆಂದಾಗ ರಾಯರು ತಿರಸ್ಕರಿಸಿಬಿಟ್ಟರು. "ಶಶಿಕಿರಣ್"ದಲ್ಲಿ ಹುಟ್ಟಿದ ಮಕ್ಕಳು ರಾಯರೊಂದಿಗೆ ಕ್ರಿಕೆಟ್ ಆಡುತ್ತ ಬೆಳೆಯುತ್ತಿದ್ದರು. ನಂತರ ಉಚ್ಚ ಶಿಕ್ಷಣ, ನೌಕರಿಗೆಂದು ದೇಶ-ವಿದೇಶಗಳ ಉದ್ದಗಲಕ್ಕೆ ಹಂಚಿಹೋಗುತ್ತಿದ್ದರು. ಟೀಮಿನಲ್ಲಿ ಸದಾಕಾಲ ಹೊಸ ಪೀಳಿಗೆಯ ಮಕ್ಕಳು ಸೇರ್ಪಡೆಯಾಗುತ್ತಲೇ ಇದ್ದರು. ಹೀಗಾಗಿ ನಮ್ಮಿಬ್ಬರಿಗೆ ಶಾಶ್ವತ ಸದಸ್ಯರಾಗಿ ಮುಂದುವರಿಯಲು ಅನುಕೂಲವೇ ಆಯಿತು. ಮಾಜಿ

ಸದಸ್ಯರು ಬೆಂಗಳೂರಿಗೆ ಬಂದಾಗೊಮ್ಮೆ ಒಂದೆರಡು ಮ್ಯಾಚ್ ಆಡದೆ ಹಿಂದಿರುಗುತ್ತಿರಲಿಲ್ಲ. ಅಲ್ಲದೇ ಅನಾಮಧೇಯರಾಗಿ ಧನಸಹಾಯ ಮಾಡುತ್ತಿದ್ದರು. ರಾಯರೂ ಹಿಂದೆ ಬಿದ್ದಿಲ್ಲ. ಅಸ್ತಿತ್ವದಲ್ಲಿ ಇಲ್ಲದ ಈ ಕ್ರಿಕೆಟ್ ಟೀಮಿಗೆ, ತಮ್ಮ ಆಸ್ತಿಯ ಕೊಂಚಪಾಲು ಸಂದಾಯವಾಗಬೇಕೆಂದು ಉಯಿಲಿನಲ್ಲಿ ಬರೆದು ಇಟ್ಟಿದ್ದಾರಂತೆ. ನಂಬಿದರೆ ನಂಬಿ !

○

# ರಾಯರ ಹೇರ್ ಕಟ್



ಪ್ರತಿವರ್ಷವೂ ಮುಂಗಡಪತ್ರ (ಬಜೆಟ್) ಅಧಿವೇಶನದ ಹಿಂದು ಮುಂದಿನ ದಿನಗಳಲ್ಲಿ ಜನಸಾಮಾನ್ಯರು ಎದುರಿಸಬಹುದಾದ ಬಿಕ್ಕಟ್ಟು, ಪಡಲಿರುವ ಪಾಡುಗಳ ಕುರಿತು ಮುಂಗಡವಾಗಿಯೇ ಸಂಕಟಪಡುವ ರಾಯರು ಈ ವರ್ಷ ಸಮಾಧಾನವಾಗಿಯೇ ಇದ್ದರು. "ರಾಯರೆಕಾನಮಿಕ್ಸ"ದ ಅರ್ಭಟಕ್ಕೆ ವರ್ಷವರ್ಷವೂ ಹೊಂದಿಕೊಳ್ಳುತ್ತ ಬಂದ ನಮಗೆಲ್ಲ ಇದು ಬಲೇ ಸೋಜಿಗದ ವಿಷಯವಾಗಿತ್ತು. ಕೊನೆಗೆ ಧೈರ್ಯಮಾಡಿ ಕೇಳಿಯೇ ಬಿಟ್ಟೆ. "ಈ ಬಾರಿಯ ಮನಮೋಹನಸಿಂಗರ ಬಜೆಟ್ ನಿಮಗೆ ಅನುಕೂಲ ವಾಗಿದೆಯೇ ?"

"ಇದೆಯೆಂದರೆ ಇದೆ. ಇಲ್ಲವೆಂದರೆ ಇಲ್ಲ" ಸಂದಿಗ್ಧವಾಗಿ ಉತ್ತರಿಸಿ ದರು. ಬಿಡದೇ ಇನ್ನಷ್ಟು ವಿವರಣೆ ಕೇಳಿದೆ. ತುಂಬ ಗಂಭೀರವಾಗಿಯೇ

ಉತ್ತರಿಸಿದರು. "ಈಗ ಸಡಿಲಗೊಂಡಿರುವ/ಸಡಿಲಿಸಲಿರುವ ವಿದೇಶೀ ಆರ್ಥಿಕ
ನೀತಿಯಿಂದ ಲೆಕ್ಕವಿಲ್ಲದಷ್ಟು ವಿದೇಶೀ ಬಂಡವಲುದಾರರು ಈ ದೇಶವನ್ನು
ಆಕ್ರಮಿಸಲಿದ್ದಾರೆ....

"ಹೂಂ"

ಅಸಂಖ್ಯ ಪ್ರಮಾಣದ ವಿಲಾಸಿ ವಸ್ತುಗಳು, ತಿಂಡಿ-ತೀರ್ಥಗಳು, ಫ್ಯಾಶನ್
ಸಾಧನಗಳು, ಒಡವೆ ವಸ್ತುಗಳು, ಇಲೆಕ್ಟ್ರಾನಿಕ್ ಸಾಮಗ್ರಿಗಳು....

ಈ ಯಾವ ವಸ್ತುಗಳಲ್ಲೂ ರಾಯರಿಗೆ ಆಸಕ್ತಿ ಇಲ್ಲ, ಇದರಿಂದ ಅವ
ವೈಯಕ್ತಿಕ ಜೀವನದಲ್ಲಿ ಯಾವ ವ್ಯತ್ಯಾಸವೂ ಬರುವದಿಲ್ಲ.ವೆಂದು ಗೊತ್ತಿದ್
ರಿಂದ ಅನಾಸಕ್ತಿಯ ಹೂಂಕಾರ ಹಾಕಿದೆ.

ಬಗೆಬಗೆಯ ಕೇಶಾಲಂಕಾರಗಳು, ಕೇಶವಿನ್ಯಾಸಗಳು, ಕೇಶಕತ
ನಾಲಯಗಳು ಕಾಣಿಸಿಕೊಳ್ಳಲಿವೆ....! ಬೋಳಾಗುತ್ತಿರುವ ತಲೆಯ ಮೇ
ಕೈಯಾಡಿಸಿ ಹೇಳಿದರು.

"ಹೂಂss. ಆದರಿಂದ ನಿಮಗೇನ್ರಿ ಮಹಾ ವ್ಯತ್ಯಾಸ ಬೀಳ್ತಿರೋದು ?
ಅಸಹನೆಯಿಂದ ಕೇಳಿದೆ.

"ಖಂಡಿತ ವ್ಯತ್ಯಾಸಬೀಳುತ್ತದೆ. ಈಗಾಗಲೇ ಮಿತಿಮೀರಿ ಬೆಳೆ
ಕ್ಷೌರದ ವೆಚ್ಚ ಗಗನಕ್ಕೇರುತ್ತದೆ!" ಅತಿ ಮುಖ್ಯ ಮುದ್ದೆಯನ
ಕೊನೆಗೊಮ್ಮೆ ವಿವರಿಸಿದ್ದರಿಂದ, ಈ ಸಮಸ್ಯೆ ನನ್ನನ್ನು ಯಾವ ತರದಲ್ಲ
ಬಾಧಿಸುವದಿಲ್ಲವೆಂದು ನೆಮ್ಮದಿಯ ನಿಟ್ಟುಸುರು ಬಿಟ್ಟೆ.

ಆದರೆ ನನ್ನ ನೆಮ್ಮದಿ ಮುಂದರಿಯಲಿಲ್ಲ. ಮರುದಿನವೇ "ಕಾಮತ
ಕ್ಷೌರ ಪ್ರಸಂಗ : ಕೆರೆದುಬಂದ ದಾರಿ" ಎಂದು 45 ವರ್ಷಗಳ ಕ್ಷೌ
ದಾಖಲೆಗಳ ಕಡತವನ್ನು ಹುಡುಕಿ ತಂದು ಎದುರಿಗೆ ಇಟ್ಟರು. "ನಮ
ಖರ್ಚು ಬರುವ ವರ್ಷಗಳಲ್ಲಿ ಮಿತಿಮೀರಲಿದೆ. ಖರ್ಚಿಗೆ ಸರಿಯಾಗಿ ಯಾ
ಉತ್ಪನ್ನವೂ ಬೆಳೆಯುವದಿಲ್ಲ. ಆದ್ದರಿಂದ ದೈನಂದಿನ ಜೀವನದ ಅ

ಮುಖ್ಯವಾದ ಬಾಬ್ತುಗಳನ್ನು ಗುರುತಿಸಿ ವೆಚ್ಚವನ್ನು ಹತೋಟಿಗೆ ತರುವದೊಂದೇ ನಮಗುಳಿದ ಮಾರ್ಗ. ನಖಶಿಖಾಂತವಾಗಿ ವೆಚ್ಚದ ಕಡಿತ ಪ್ರಾರಂಭಿಸಬೇಕು ತಿಳಿಯಿತೇ ? ಶಿಖಾ ಎಂದರೆ–ತಲೆಯಿಂದ ನಖ–ಉಗುರಿನ ವರೆಗೆ ಖರ್ಚನ್ನು ಈ ವರ್ಷದಲ್ಲಿ ಕಡಿಮೆ ಮಾಡಿಯೇ ತೋರಿಸುತ್ತೇನೆ ! ಎಂದು ಚಾಣಕ್ಯ ಪ್ರತಿಜ್ಞೆ ಮಾಡಿದರು. ಕುತೂಹಲದಿಂದ ಕಾಮತರ ಕ್ಷೌರಪುರಾಣದ ದಸ್ತಾವೇಜು ತೆಗೆದೆ. ಓದುಗರ ಕುತೂಹಲಕ್ಕಾಗಿ ಮಹತ್ವದ ಘಟನಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸುತ್ತೇನೆ.

ರಾಯರಿಗೆ ಬುದ್ಧಿ ಬಂದಾಗಿನಿಂದ ಕಾಲೇಜಿಗೆ ಹೋಗುವ ತನಕ ಪರಿಚಯವಿದ್ದ ಹಜಾಮು ಒಬ್ಬನೇ. ತಿಂಗಳೆರಡು ತಿಂಗಳಿಗೆ ಮನೆಗೇ ಬಂದು, ತಲಾ ಎಂಟಾಣೆ ಲೆಕ್ಕದಲ್ಲಿ ಮನೆಯ ಆರೆಂಟು ತಲೆಗಳಿಗೆ ಕತ್ತರಿಯ ತುಂಟಾಟದ, ಚೆನ್ನಾಗಿಯೇ ರುಚಿತೋರಿಸಿ ಹೋಗುತ್ತಿದ್ದ ಜಟ್ಟು. ಉಣ್ಣೆ ಬೆಳೆದ ಕುರಿಗಳ ವೈ ಹೋಲುತ್ತಿದ್ದ ಮಕ್ಕಳು ಇನ್ನೆರಡು ತಿಂಗಳು ನುಣ್ಣನೆಯ, ಕುರುಚಲ ಕಾಡಿನ, ಈಚಲಗರಿಯ, ಹಂದಿಗಣೆಯ, ಕೊನೆಗೆ ದಟ್ಟ ಕೂದಲಿನ ನಾನಾ ವಿನ್ಯಾಸಗಳ ತಲೆಗಳನ್ನು ಹೊತ್ತಿರುತ್ತಿದ್ದವು. ಆ ಸಮಯದಲ್ಲಿ ಗೋಕರ್ಣ ಹಜಾಮತಿಗೆ ನಾಲ್ಕಾಣೆ, ಕ್ರಾಪಿಗೆ ಆರಾಣೆ ಯಿತ್ತೆಂದು ಊರೂರು ತಿರುಗುತ್ತಿದ್ದ ದಾಮು ಸಮಾಚಾರ ತಂದಿದ್ದ. ಹೊನ್ನಾವರ, ಮಾತ್ರ ಮುಂಬೈಯಿಂದ ಜನ ಹೆಚ್ಚಾಗಿ ಬಂದು ಹೋಗುತ್ತಿದ್ದ ಊರಾದ್ದರಿಂದ "ಮುಂಬೈ ಫ್ಯಾಶನ್, ಮುಂಬೈ ರೇಟ"ಗೆ ಪ್ರಸಿದ್ಧವಾಗಿತ್ತು. ಕ್ಷೌರದ ನಂತರ ತಲೆಯುರಿ ತಪ್ಪುತ್ತಿರಲಿಲ್ಲ. ಆದರೆ ಜಟ್ಟುವಿಗೆ ಪ್ರತಿಸ್ಪರ್ಧಿಗಳೇ ಇರಲಿಲ್ಲ.

ಹಾಯ್‌ಸ್ಕೂಲಿಗೆ ಬಂದಾಗ ನುಣ್ಣನೆ ಕಟ್ ಹೋಗಿ ನೆವಿಕಟ್ ಬಂದರೂ ಜಟ್ಟು ದರವೇರಿಸದೇ ಮುಂಬೈಕಟ್‌ನ್ನೇ ಧಾರಾಳಿಯಾಗಿ ನೀಡುತ್ತಿದ್ದ.

ಕಾಲೇಜಿಗೆಂದು ಧಾರವಾಡ ಸೇರಿದಾಗ, ಪ್ರಥಮ ಬಾರಿಗೆ ಸಿಟಿಯ ಸಲೂನಗಳ ದರ್ಶನ ರಾಯರಿಗಾಯ್ತು. ಸಹಪಾಠಿಗಳು ಹೆಚ್ಚಾಗಿ ಎಡತಾಕು

ತ್ತಿದ್ದ "ಕೇಂಬ್ರಿಜ್ ಹೇರ ಕಟಿಂಗ್ ಸಲೂನ್‌ಗೆ, ತಲೆಯ ಭಾರ ವಿಪರೀತ
ವಾದಾಗ ನುಗ್ಗಿದರು. ಸ್ಕಾಲರ್ ವಿದ್ಯಾರ್ಥಿಗಳಿಗೆ ಮೀಸಲಾದ ಸಲೂನಿನ
ಫೀಸೂ ದೊಡ್ಡದೇ! ವಿಶೇಷ ಕಟ್, ವಿಶೇಷ ಫೀ ಎಂದು ಸಾಂತ್ವನ
ಮಾಡಿಕೊಂಡು ಬಂದ ಒಂದೇ ತಿಂಗಳಿಗೆ ಮೊದಲಿನ ಎರಡುಪಟ್ಟು ಕೂದಲು
ಬೆಳೆದಾಗ "ಕೇಂಬ್ರಿಜ್" ಕೈಚಳಕ ಗೊತ್ತಾಯ್ತು, ಕೂದಲಿಗೆ ಕಡಿಮೆ
ಕತ್ತರಿ, ಜೇಬಿಗೆ ದೊಡ್ಡ ಕತ್ತರಿ, ಎಂದು. ಉಳಿತಾಯ ಯೋಜನೆಯನ್ನು
ಚಿಕ್ಕಂದಿನಿಂದಲೇ ಮೈಗೂಡಿಸಿಕೊಂಡ ರಾಯರು, ಇತರ ಸಲೂನಗಳ ರೇಟು
ಗಳನ್ನು ಅಭ್ಯಸಿಸಿದರು. "ಜೈಹಿಂದ್"ದ ಜನ್ನನಿಂದ ನಾಲ್ಕಾರು ವರ್ಷ
ತಲೆಯ ಸೇವೆಯನ್ನು ಪಡೆದದ್ದನ್ನು ಕೃತಜ್ಞತೆಯಿಂದ ಕ್ಷೌರದ ಕಡತದಲ್ಲಿ
ಉಲ್ಲೇಖಿಸಿದ್ದಾರೆ. "ಕೇಂಬ್ರಿಜ್" ಕಡಿಮೆ ಕೂದಲು ಹೊಡೆದು ಹೆಚ್ಚು
ದುಡ್ಡು ಕಿತ್ತರೆ ಈ ಜನ್ನ (ಜನಾರ್ದನ) ಹೆಚ್ಚು ಕೂದಲು ಹೊಡೆದು ಕಡಿಮೆ
ಕಾಸು ಪಡೆಯುತ್ತಿದ್ದ. ದೊಡ್ಡ ನೋಟನ್ನು ಕೊಟ್ಟರೂ ಆತ ಚಿಲ್ಲರೆ
ನೋಟು, ನಾಣ್ಯ ಪಡೆದು ಕೇವಲ ಹನ್ನೆರಡಾಣೆ ಛಾರ್ಜ್ ಮಾಡುತ್ತಿದ್ದ.
ಅಂತೂ ಅಮೇರಿಕೆಗೆ ಉಚ್ಚ ವಿದ್ಯಾಭ್ಯಾಸಕ್ಕೆ ಹೋಗುವ ತನಕ ಈ ವ್ಯವಸ್ಥೆ
ಮುಂದರಿದರೂ ರಜಾದಿನಗಳಲ್ಲಿ ಊರಿಗೆ ಹೋದಾಗ ಜಟ್ಟುವಿನ
ತಲೆಯುರಿಯ ಉಪಚಾರ ಪಡೆಯಲು ಮರೆಯುತ್ತಿರಲಿಲ್ಲ.

ಅಮೇರಿಕೆಯಲ್ಲಿ ಹಜಾಮತಿಯ ಅನುಭವಗಳೋ ಅಪೂರ್ವ. ಡಾಲರು
ಗಳಲ್ಲಿ ಹಣ ಸುರಿಯಬೇಕಾದ ಸಾಮರ್ಥ್ಯ ಈ ವಿದ್ಯಾರ್ಥಿಗೆ ಎಲ್ಲಿಂದ ಬರ
ಬೇಕು? ಸಹಪಾಠಿಗಳೊಂದಿಗೆ ವಿಚಾರ-ವಿನಿಮಯ ನಡೆಸಿ 50 ಸೆಂಟಿಗೆ
ನೆವಿಕಟ್ ಕೊಡುತ್ತಿದ್ದ ನೀಗ್ರೋ ಕ್ಷೌರಿಕನೊಬ್ಬನ ಪತ್ತೆ ಹಚ್ಚಿದಾಯ್ತು.
ಆದರೆ ಅಲ್ಲಿ ನಿಂತ ಬಲು ಉದ್ದ ಕ್ಯೂ ನೋಡಿ ನಿರಾಶೆಯಿಂದ ಮರಳಿ
ಬಂದದ್ದೂ ಆಯಿತು.

ಭಾರತದ ಬೇರೆ ಬೇರೆ ಪ್ರದೇಶಗಳಿಂದ ಬಂದ ನಾಲ್ವರು ವಿದ್ಯಾರ್ಥಿ
ಗಳೊಂದಿಗೆ ರಾಯರು ಅಮೇರಿಕೆಯಲ್ಲಿ ಸಹಜೀವನ ನಡೆಸುತ್ತಿದ್ದರು. ಅವರ
ಉಳಿದ ಸಮಸ್ಯೆಗಳು ಬೇರೆ ಬೇರೆ ಆಗಿದ್ದರೂ ಎಲ್ಲರನ್ನೂ ಬಾಧಿಸುತ್ತಿದ್ದ

ಸಾಮಾನ್ಯ ಸಮಸ್ಯೆ ಕ್ಷೌರದ್ದಾಗಿತ್ತು. ಕೊನೆಗೆ ಒಬ್ಬರಿಗೆ ಇನ್ನೊಬ್ಬರು ಕ್ಷೌರ ಹೊಡೆಯುವದೆಂದು ನಿರ್ಧರಿಸಿ "ಹಜಾಮತಿಯ ಹತ್ತು ಪಾಠಗಳು" (ಟೆನ್ ಲೈಸನ್ಸ್ ಇನ್ ಹೇರ್ ಕಟಿಂಗ್) ಎಂಬ ಪುಸ್ತಕತಂದದ್ದಾಯಿತು. ಆದರೆ ಕತ್ತರಿಯ ಕೈಚಳಕ ಸಾಧಿಸಿದ್ದು ರಾಯರೊಬ್ಬರಿಗೇ ! ಚಿಕ್ಕಂದಿನಿಂದ ರಟ್ಟು, ಕಾಗದಗಳ ವಿವಿಧ ಕಲಾಕೃತಿಗಳನ್ನು ಕತ್ತರಿಸಿ ರೂಢಿಯಿದ್ದವ ರಾದ್ದರಿಂದ ನಾಲ್ವರೂ ಸಹವಾಸಿಗಳು ಇವರ ಕೈಚಳಕದ ಲಾಭ ಪಡೆದೇ ಪಡೆದರು. ಇವರು ಮಾತ್ರ ಇಲಿ (ಭಕ್ಷಣ) ಕಟ್, ಜಿರಳೆ (ತಿಂದ) ಕಟ್, ಆಡುಮೇಯ್ದ ಕಟ್, ನೆವಿಕಟ್, ಕ್ಲೋಸ್‌ಕಟ್ ಇತ್ಯಾದಿ ವಿವಿಧ ಕಲಾಕೃತಿ ಗಳಿಗೆ ತಮ್ಮ ತಲೆಯನ್ನು ಒಡ್ಡಿ ಪ್ರತಿ ಸಹವಾಸಿಯ ನೂತನ ಪ್ರಯೋಗಕ್ಕೂ ಇತರರ ನಗೆಪಾಟಲಿಗೂ ಗುರಿಯಾಗಬೇಕಾಯ್ತು !

ಸಹವಾಸಿ ಸ್ನೇಹಿತರು ಅಮೇರಿಕೆ ಬಿಡುವಾಗ "ಹಜಾಮತಿಯ ಹತ್ತು ಪಾಠಗಳು" ಪುಸ್ತಕವನ್ನು ಕೃತಜ್ಞತಾ ಸೂಚಕ ಕಾಣಿಕೆಯಾಗಿ ಇವರಿಗೆ ಕೊಡ ಮಾಡಿದರು.

ನಂತರದ ವರ್ಷಗಳಲ್ಲಿ ಹತ್ತಾರು ಊರುಗಳಲ್ಲಿ ನೂರಾರು ಬಾರಿ ಕ್ಷೌರದ ಯೋಗ ಬಂದರೂ ಜಟ್ಟುವಿನ ಮಿತವ್ಯಯ, ಜೆನ್ನನ ಕೈಚಳಕವನ್ನು ಒಟ್ಟಿಗೆ ಸಾಧಿಸಿದ ಒಬ್ಬನಾದರೂ ಅವರಿಗೆ ದೊರೆಯಲೇ ಇಲ್ಲವಂತೆ !

ಬೆಂಗಳೂರಿಗೆ ಬರುವ ಹೊತ್ತಿಗೆ ರಾಯರ ಕೂದಲು ಉದುರಲಾರಂಭಿಸಿ ತಲೆ ಅರ್ಧ ಬೋಳಾಗಿತ್ತು. ಆದರೆ ಕ್ಷೌರದ ಚಾರ್ಜು ಮೂರುಪಟ್ಟು ಜಾಸ್ತಿಯಾಗಿತ್ತು. ಸಾಕಷ್ಟು ಓಡಾಡಿ ಮಂಗಳವಾರ ಮಾತ್ರ ತೆರೆಯುತ್ತಿದ್ದ ಪುಟ್ಟ ಕ್ಷೌರದಂಗಡಿಯ ಪತ್ತೆ ಹಚ್ಚಿದರು. ಹುಡುಗನಂತೆ ಕಾಣುತ್ತಿದ್ದ ಕ್ಷೌರಿಕ ವಿದ್ಯಾರ್ಥಿಯಾಗಿರಬೇಕು, ಅಮೇರಿಕೆಯ ವಿದ್ಯಾರ್ಥಿ ಹಜಾಮರಂತೆ ಅರ್ಧ ಫೀ ಚಾರ್ಜ್ ಮಾಡುತ್ತಿರಬಹುದು ಎಂದುಕೊಂಡಿರಬೇಕು ! ಆದರೆ ಅವನಾದರೋ ಪಡಪೋಶಿತನದಲ್ಲಿ ಪಳಗಿದ್ದ. ತಿರುಪತಿ ಹಜಾಮತಿತಜ್ಞ ತನ್ನ ಕುಶಲತೆ ಚೆನ್ನಾಗಿ ತೋರ್ಪಡಿಸಿ ಪರಿಚಯದವನಿಗಿಂತ 50 ಪೈಸೆ ಹೆಚ್ಚು ತೆಗೆದುಕೊಂಡ. ಯಾಕೆಂದು ಕೇಳಿದರೆ, "ನಿಮಗೆ ಕೂದಲು ಕಡಿಮೆ ಸಾರ್ ! ಒಂದೊಂದೇ ಎಳೆ ಎಣಿಸಿ ಕಟ್ ಮಾಡಬೇಕಾಗುತ್ತೆ. ತುಂಬ ಶ್ರಮ !" ಎಂದು 'ನ್ಯಾಯ'ವಾದ ಮಾತನ್ನೇ ಆಡಿದ್ದ.

ಕೂದಲು ಕಡಿಮೆಯಾಗುತ್ತಿದ್ದಂತೆ, ರಾಯರ ಚಹರೆಯೇ ಬದಲಾಗುತ್ತಿದೆಯೆಂದು ನನಗೆ ಆತಂಕವಾದರೆ, ಅವರು, ಪೂರ್ತಿ ತಲೆ ಬೋಳಾದರೆ ಕ್ಷೌರದ ವೆಚ್ಚ, ಖಾಯಂ ನಿಂತು ಹೋಗುವದೆಂದು ಹೆಚ್ಚಿನ ನೆಮ್ಮದಿಯಿಂದ ಇದ್ದರು. ಆದರೆ ಅಳಿದು ಉಳಿದ ಕೂದಲ ಬೆಳವಣಿಗೆ ಭರದಿಂದಲೇ ಸಾಗಿತ್ತು. ತಿಂಗಳಿಗೊಮ್ಮೆ "ಕಷ್ಟ"ಕ್ಕೊಳಗಾಗದಿದ್ದರೆ ಕಿವಿಯ ಮೇಲೆ ಕೂದಲೆಲ್ಲ ಮುಚ್ಚಿಕೊಂಡು, ನನ್ನ ಮಾತು ಕೇಳಿಸುವದೇ ಇಲ್ಲವೆಂಬಂತೆ ನಿರ್ಲಿಪ್ತರಾಗಿರುತ್ತಿದ್ದರು. ದುಂಬಾಲು ಬಿದ್ದು ನಾನೇ ಸಲೂನಿಗೆ ಕಳಿಸುವ ಪಾಳಿ ಬರುತ್ತಿತ್ತು. ಪ್ರತಿಸಲ ಚಾರ್ಜು ಒಂದು ರೂಪಾಯಿ ಏರುತ್ತಿತ್ತು. ಕೊನೆಗೆ 10/-ಗೆ ಬಂದು ನಿಂತಿತ್ತು. ರಾಯರ ಕ್ಷೌರದ ಕಡತ ಇಲ್ಲಿಗೆ ಕೊನೆಗೊಂಡಿತ್ತು.

ಈ ಬಗೆಹರಿಯದ ಸಮಸ್ಯೆಗೆ ಕಾಯಂ ಉತ್ತರ ಹುಡುಕುವ ಬಗ್ಗೆ ಹಗಲುರಾತ್ರಿ ಯೋಚಿಸಿ ಮುಂದಲೆಯಲ್ಲಿದ್ದ ಹತ್ತೆಂಟು ಕೂದಲೂ ಉದುರಿದವು. ಕೊನೆಗೊಂದು ರಾತ್ರಿ ವಿಚಾರ ಮಿಂಚಿ ಯುರೇಕಾ ! ಎಂದು ಕೂಗಿ ಮಲಗಿದ್ದರು.

ಮರುದಿನ ಎದ್ದವರೇ ತಮ್ಮ ಗುಜರಿ-ಗುತ್ತಿಗೆಯ ಗೋದಾಮಿಗೆ ಭೇಟಿಯಿತ್ತರು. 35 ವರ್ಷಗಳ ಹಿಂದಿನ ಹಳೇ ಟ್ರಂಕಿನಿಂದ "ಹಜಾಮತಿಯ ಹತ್ತು ಪಾಠಗಳು" ಹೊರತೆಗೆದರು. ಬೆಳಗಿನ ನಾಶ್ತಾ ತಯಾರಿಸುತ್ತಿದ್ದವಳನ್ನು ಕೂಗಿ ಕರೆದರು.

"ಇಕಾ, ನಮ್ಮ ಭವಿಷ್ಯ ಅಥವಾ ನನ್ನ ತಲೆಯ ಭವಿಷ್ಯ, ನಿನ್ನ ಕೈಯಲ್ಲೇ ಇದೆ ! ಮನಸ್ಸು ಮಾಡಿದರೆ ನೀನೊಬ್ಬ ಉತ್ತಮ ಕಲಾಕಾರ್ತಿಯಾಗಬಹುದು !" ಪುಸ್ತಕ ಕೈಗಿತ್ತರು.

"ಅಂದರೆ ?"

"ಈಗೆಲ್ಲ ಬ್ಯೂಟಿ ಪಾರ್ಲರ್‌ಗಳು ಎಲ್ಲೆಲ್ಲೂ ತಲೆಯೆತ್ತಿವೆ. ಕೋತಂಬರಿ ಕಟ್ಟು, ಹಿಡಿಜುಟ್ಟು ಮಾಯವಾಗಿವೆ. ಬಗೆಬಗೆಯ ಹೇರ್‌ಸ್ಟೈಲ್‌ಗಳಿಂದ ಬಾಬ್, ಕ್ರಾಪ್‌ಕಟ್‌ಗಳಿಂದ ನಾರಿಯರು ವಿರಾಜಿಸುತ್ತಿದ್ದಾರೆ.

ಮನಸ್ಸು ಮಾಡಿದರೆ ನಿವೃತ್ತಿಯ ನಂತರ ನೀನು ಈ ವೃತ್ತಿ ಕೈಕೊಳ್ಳ ಬಹುದು. ಬೇಕಿದ್ದರೆ ಕೇಶಕರ್ತನ ಸಲಹಾಕಾರ್ತಿಯಾಗಿಯೂ ಕೆಲಸ ಮಾಡಬಹುದು" ಅವರೋಘ ಸಲಹೆ ಇತ್ತರು.

ನಾನು ಕಕ್ಕಾವಿಕ್ಕಿಯಾದೆ. ರೊಡ್ಡಿ (ಎಡಗೈ ಮುಂದೆ)ಯಾಗಿ ಹುಟ್ಟಿ, ನನಗೆ ನಯವಾಗಿ ಕತ್ತರಿಸುವ ಯಾವ ಕಲೆಯೂ ಸಾಧಿಸಿರಲಿಲ್ಲ. ಅಡಿಗೆ ಮನೆಯಲ್ಲಿ ಅರೆಯುವ, ಕಡೆಯುವ, ಕೊಯ್ಯುವ, ಹೆಚ್ಚುವ, ಕತ್ತರಿಸುವ ಯಾವ ನವಿರಾದ ಕೆಲಸವಿದ್ದರೂ ರಾಯರನ್ನು ಕೂಗಿ ಕರೆದು ಅವರಿಂದಲೇ ಮಾಡಿಸುವ ಉತ್ತಮ ಪರಿಪಾಠವನ್ನು ೨೮ ವರ್ಷಗಳಿಂದ ಬೆಳೆಸಿಕೊಂಡಿದ್ದೆ. ಅಂಥವಳಿಗೆ ಆದೇ ವ್ಯಕ್ತಿಯ ಕೂದಲೆಣಿಸಿ ಕತ್ತರಿ ಪ್ರಯೋಗಿಸುವ ಸಾಹಸ ಸಾಧ್ಯವೇ ? ನಾನು ಒಪ್ಪಲಿಲ್ಲ.

ರಾಯರು ಪಟ್ಟು ಬಿಡಲಿಲ್ಲ. ಹೆಂಡತಿಯಿಂದ ತಲೆ (ಕೂದಲು) ಹೊಡೆಸಿಕೊಳ್ಳುವ ಸಾಹಸಿಗಳ ಯುಗ ಮುಗಿದಿಲ್ಲವೆಂದು ಮನವರಿಕೆ ಮಾಡಿ ಕೊಟ್ಟರು. ರೇಷ್ಮೆ ಸೀರೆ, ಪ್ರವಾಸ, ಪಿಕ್–ನಿಕ್‌ಗಳ ಆಮಿಷ ಒಡ್ಡಿದರು. ಅವರು ಕಾಣಿಕೆಯಾಗಿ ಕೊಡಲಿದ್ದ ಸಾಮಾನುಗಳ ಬೆಲೆ, ಆಯುಷ್ಯವಿಡೀ ಬೆಂಗಳೂರಿನ ಅತ್ಯಂತ ದುಬಾರಿ ಸಲೂನಿಗೆ ಟ್ಯಾಕ್ಸಿಯಲ್ಲಿ ಹೋಗಿ ಭರಿಸಬಹು ದಾದ ವೆಚ್ಚಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗಿತ್ತು.

"ನಾನು ಕತ್ತರಿಯಾಡಿಸಿದ ತಲೆ ಹೊತ್ತು ತಿರುಗೋಕೆ ಆಗೋ ದಿಲ್ಲಾರೀ ! ಶುದ್ಧ ಅಪಮಾನ. ಯಾವ ಧೈರ್ಯದ ಮೇಲೆ ನನ್ನ ಕೈಗೆ ತಲೆ ಕೊಡ್ತೀರಿ." ಛೇಡಿಸಿದೆ.

"ಅಯ್ಯೋ ನನ್ನ ಹೃದಯ ಎಂದೋ ನಿನಗೆ ಒಪ್ಪಿಸಿ ಆಗಿದೆಯಲ್ಲೆ ಕಟ್ಟಾಣಿ ! ಈಗ ತಲೆ ಕೊಡಲು ಹಿಂದೆ ಮುಂದೆ ನೋಡುವದಿಲ್ಲ. ಅಲ್ಲದೇ ನಿನ್ನ ಕೈ ಹತ್ತಿದರೆ ಅದು ಖಾಲಿ ಆಗುವುದಿಲ್ಲ ಎಂಬ ವಿಶ್ವಾಸವಿದೆ" ಆಶ್ವಾಸನೆ ಯಿತ್ತರು.

ಈ ಮಹಾತ್ಯಾಗವನ್ನು ಪ್ರಶ್ನಿಸುವ ಸಾಧ್ಯಿಯುಂಟೆ ? ಒಪ್ಪಿದೆ.

ಅಂತೂ ಒದ್ದಾಡಿ, ೨ ಗಂಟೆ ಕುಳಿತು ಬೆವರು ಸುರಿಸಿ, ಅವರ ತಲೆ ಹಿಡಿದು ಅಲುಗಾಡಿಸಿ, ನನಗೆ ಬೇಕಾದಂತೆ ತಲೆ ವಾಲಿಸಿ, ಕುತ್ತಿಗೆಯನ್ನು ತಿರುಚಿ ಹಿಡಿದು, ಅಲುಗಾಡದಿರುವಂತೆ ತಾಕೀದು ಮಾಡಿ, ಅಂತೂ 'ತಲೆ' ಮುಗಿಸಿದೆ. ಪರಿಣಾಮ, ಸರಿಪಡಿಸಲಾರದ ಹೇಳ ಹೆಸರಿಲ್ಲದ ಕ್ರಾಪ್‌ಕಟ್ ! ಅವರ ಪಾಲಿಗೆ ಉಳುಕಿದ ಕತ್ತು, ತಲೆಯುರಿ.

ಎರಡು-ಮೂರು ಪ್ರಾಯೋಗಿಕ ಕಟ್‌ಗಳ ನಂತರ ನನ್ನನ್ನೊಬ್ಬ ಕುಶಲ ಕೇಶಕರ್ತನ ಕಲಾವಿದೆಯನ್ನಾಗಿಸಬೇಕೆಂಬ ಅವರ ದೂರದಾಸೆ ಮಣ್ಣು-ಗೂಡಿತು.

ಎರಡು ಮೂರು ತಿಂಗಳು ಕಳೆದವು. ತಿರುಗಿ ಕಟ್‌ಕೊಡಲು ಇವರು ಹೇಳಲಿಲ್ಲ. ಅತ್ತ ಸಲೂನಿಗೂ ಹೋಗಲಿಲ್ಲ. ಈಗ ಅಳಿದುಳಿದ ಕೂದಲನ್ನೇ ಬೆಳೆಸುತ್ತಾರಂತೆ. ಈಗಾಗಲೇ ಕೆಲ ಬುದ್ಧಿಜೀವಿಗಳು ಈ ಕೇಶವಿನ್ಯಾಸ ಕೈಕೊಂಡ ಉದಾಹರಣೆಗಳನ್ನು ಹೇಳಿದರು. ಈಗ "ಬುದ್ಧಿಜೀವಿಗಳ ಹೇರ ಸ್ಟೈಲ್"ದಿಂದ ಅವರ ತಲೆ ಶೋಭಿಸುತ್ತಿದೆ. ಅದಕ್ಕೆ ಹಣ ತೆರಬೇಕಾಗಿಲ್ಲ. ಕತ್ತು ಉಳುಕಿಸಿಕೊಳ್ಳಬೇಕಾಗಿಲ್ಲ. ನನಗೆ ಬೆಣ್ಣೆ ಹಚ್ಚಬೇಕಾಗಿಲ್ಲ. ಮತ್ತೆ, ಇವರನ್ನು ನೋಡಿದ ಹತ್ತು ಹಲವು ಜನ, ನಿಜಕ್ಕೂ ಬುದ್ಧಿಜೀವಿಯೆಂದು ನಂಬಿದ್ದರಿಂದ ಇತ್ತೀಚೆಗೆ ನಮಸ್ಕರಿಸುವವರ ಸಂಖ್ಯೆ ಹೆಚ್ಚಾಗಿದೆಯಂತೆ !

o

# ಅಜ್ಞಾತರ ಪತ್ರಗಳು



ದಿನಂಪ್ರತಿ ನಸುಕಿನಲ್ಲಿ ತಿರುಗಾಡಲು ಹೊರಟಾಗ ರಾಯರು ವಿವರಿಸುವ ಸಾಮಾಜಿಕ ಘಟನೆಗಳು, ಅನ್ಯಾಯ, ಮೋಸ, ವಂಚನೆ, ಶೋಷಣೆಗಳ ನಿದರ್ಶನಗಳಿಗೆ ಕೊನೆ ಮೊದಲೇ ಇರುವದಿಲ್ಲ. 'ಈ ಮರಗುಳಿಗೆ ಇವನ್ನೆಲ್ಲ ಹೇಳುತ್ತ ಹೋದರೆ ಏನು ಪ್ರಯೋಜನ ? ಮನೆಗೆ ಹೋಗುವತನಕ ಎಲ್ಲವೂ ಮರವಿನ ಖಾತೆಗೆ ಜಮಾ ಆಗಿರುತ್ತದೆ ! ಇದನ್ನೆಲ್ಲ ಬರೆದು ಒಂದು ಪುಸ್ತಕವನ್ನಾಗಿಸ ಬಹುದಲ್ಲವೇ ?' ಎಂದು ಒಮ್ಮೆ ಪ್ರತಿಕ್ರಿಯಿಸಿದೆ. 'ಇವೆಲ್ಲ ತೀರ ಖಾಸಗಿ ವಿಷಯಗಳು. ಸಂಬಂಧಿತ ವ್ಯಕ್ತಿಗಳಿಗೆ ಮಾತ್ರ, ಇವುಗಳಲ್ಲಿ ಆಸಕ್ತಿ ಇರುವದು ಸಾಧ್ಯವಿದೆ.' ಎಂದು ತೇಲಿಸಿ ಹೇಳಿದರು. 'ಹಾಗಾದರೆ ಇನ್ನೂ ಉತ್ತಮವೇ ಆಯಿತು. ಹಾನಿಗೊಳಗಾಗುವ ವ್ಯಕ್ತಿಯು ಗಣನೆಗೆ ತಂದರೆ ಅವರಿಗೆ ಮಹದುಪಕಾರ

ಮಾಡಿದಂತಾಗುವದಲ್ಲ!' ಎಂದು ಆಗ್ರಹಿಸಿದೆ. 'ಇಲ್ಲದ ಜಂಜಾಟದಲ್ಲಿ ಸಿಲುಕಿಕೊಳ್ಳಲು ನನಗೆ ಮನಸ್ಸಿಲ್ಲ ಬೇಕಾದರೆ ಅನಾಮಧೇಯವಾಗಿ ಪತ್ರಗಳ ರೂಪದಲ್ಲಿ ಸಾಮಾಜಿಕ ಅನ್ಯಾಯಗಳನ್ನು ಆಯಾ ಸಂಬಂಧಿತ ವ್ಯಕ್ತಿಗಳ ಗಮನಕ್ಕೆ ತರಬಲ್ಲೆ!' ಎಂದರು. ಹಾಗೆಯೇ ಆಗಲೆಂದು ಒಡಂಬಡಿಕೆ ಯಾಯಿತು. ಆಫೀಸಿನಿಂದ ಹಿಂದಿರುಗುವದರೊಳಗೆ ನಾಲ್ಕು ಪತ್ರಗಳ ಪ್ರಪ್ರಥಮ ಕಂತು ನನಗಾಗಿ ಕಾದಿದ್ದವು.

ಮೊದಲನೆಯದು ಕಿರಾಣಿ ಅಂಗಡಿಯ ಮಹಮ್ಮದ ಬಂಧುಗಳ ಕಿರಾಣಿ ಭಾರಿ ಜೀನಸುಗಳಅಂಗಡಿಯ ವಿಳಾಸ ಹೊತ್ತಿತ್ತು. ಅಲ್ಲಿ ತಿಂಗಳ ಮೊದಲ ವಾರವಂತೂ ಕಾದು ನಿಂತು ಸಾಮಾನುಗಳನ್ನು ಕೊಳ್ಳಬೇಕಾಗು ತ್ತದೆ. ಈ ಅವಕಾಶವನ್ನು ಬಳಸಿಕೊಂಡು ಸಭ್ಯಳಾಗಿ ಕಾಣುವ ಓರ್ವ ಸ್ತ್ರೀಯಳು, ಕೌಂಟರ ಕೆಳಗಿನ ಕಪಾಟಿನ ಗಾಜನ್ನು ಸರಿಸಿ ಕಾಡಿಗೆ, ಕುಂಕುಮ, ಟೂತ್‌ಪೇಸ್ಟಗಳನ್ನು ಮೆತ್ತಗೆ ಹಾರಿಸಿ ತನ್ನ ಬ್ಯಾಗಿಗೆ ಸೇರಿಸುವದು ಕಂಡಿತ್ತು. ಅಂತೆಯೇ ರಾಯರ ಒಕ್ಕಣಿಕೆ ಹೀಗಿತ್ತು; 'ಮಹಮ್ಮದ್ ಸಾಹೇಬರಿಗೆ ಸಲಾಮಾಲೇಕುಂ! ಕೋಟಿ ರೂಪಾಯಿಗಳ ವ್ಯಾಪಾರ ಮಾಡುವ ತಮಗೆ ಕಾಡಿಗೆ, ಕುಂಕುಮ ಸ್ನೋಗಳ ಬೆಲೆ ಕ್ಷುಲ್ಲಕವಿರಬಹುದು. ಆದರೆ ಇದನ್ನು ಕದಿಯಲೆಂದೇ ನಿಮ್ಮಲ್ಲಿ ಬರುವವರ ದುರಭ್ಯಾಸ ಬೆಳೆಯಬಾರದಲ್ಲವೇ? ನಿಮ್ಮ ಗಾಜಿನ ಕಪಾಟಿಗೆ ಬೀಗ ಜಡಿಯುವ ಕೃಪೆ ಮಾಡುವಿರಾ?' ಎರಡನೆಯ ಪತ್ರ, 'ಕಿಟ್ಟಪ್ಪ ಎಂಬ ಬೆಣ್ಣೆಶೆಟ್ಟರಿಗೆ ಇತ್ತು. 'ಬೆಣ್ಣೆ ಮಾರುವವರು ಅಕ್ಕಿಯನ್ನು ಅಲಕ್ಷಿಸ ಬಾರದಲ್ಲವೇ? ಶೆಟ್ರೇ, ನಿಮ್ಮಲ್ಲಿ ಅಕ್ಕಿ ತೂಗುವ ಆಳಿನ ವೈಖರಿ ಗಮನಿಸಿದ್ದೀರಾ? ಐದು ಕಿಲೋಕ್ಕೆ ಹತ್ತನ್ನು ತೂಗಿ ನಂತರ ಗಿರಾಕಿಯ ಹತ್ತಿರ ಹೆಚ್ಚಿನ ಅಕ್ಕಿಯ ಬೆಲೆಯ ಅರ್ಧವನ್ನು ಪಡೆಯುವದು ತಮ್ಮ ಗಮನಕ್ಕೆ ಬಂದಂತಿಲ್ಲ. ಈ ಹಣದಿಂದ ಆತನು, ದುರ್ವ್ಯಸನಕ್ಕೆ ಬಲಿಯ ವಾಗ ಸಾಧ್ಯತೆ ಇದೆ. ಕೂಡಲೇ ಇದಕ್ಕೆ ತಡೆ ಹಾಕುವಿರಾ? ಮೂರನೆಯ ಪತ್ರ ಕಲ್ಪತರು ಸ್ಟೋರ್ಸಗೆ ಬರೆದಿತ್ತು. 'ತಮ್ಮಗಳ ವ್ಯಾಪಾರ ಭರದಿಂದ ಬೆಳೆಯುತ್ತಿರುವದು ಸಂತೋಷದ ವಿಚಾರ. ಆದರೆ ತಮ್ಮ ನೌಕರರ ಅಲಕ್ಷ

ದಿಂದಾಗಿ ಇಂಗಿನ ಡಬ್ಬಿ, ಕೇಶರದ ಪುಟ್ಟ ಕುಡಿಕೆಗಳು, ಕಾಸೂ ಕಾಣದೇ, ಕೆಲವರ ಕೈಚೀಲ ಸೇರುವದು ನ್ಯಾಯವೇ? ನಿಮ್ಮಂತೆ ಗಿರಾಕಿಗಳೂ ಧರ್ಮಿಷ್ಟರಾಗಬೇಡವೇ?" ಕೊನೆಯ ಪತ್ರ ಖಾದಿ ಭಂಡಾರದ ವಿಳಾಸ ಹೊತ್ತಿತ್ತು. "ಪ್ರೀತಿಯ ಗಾಂಧೀಜಿ ಅನುಯಾಯಿಗಳೇ! ಕಡುಬಡವರಿಗೆ ದಿನಗೂಲಿಯಾದರೂ ಸಿಗಲೆಂದು ಸರಕಾರ ಕೋಟಿಗಟ್ಲೆ, ರೂಪಾಯಿ ಹಾನಿಯನ್ನೂ ಸಹಿಸಿಕೊಳ್ಳುತ್ತದೆ. ನಿಮ್ಮ 'ಚರ್ಮಶಿಲ್ಪ ಸೇಲ್ಸ್ ವಿಭಾಗ ದಿಂದ ಕೊಲ್ಲಾಪುರ ಮತ್ತು ಇನ್ನಿತರ ಚಪ್ಪಲಿಗಳನ್ನು ಕದ್ದು ಒಯ್ಯುವಾಗಲೂ ನೀವು ಕಣ್ಣುಮುಚ್ಚಿಕೊಂಡು ಸರಕಾರವನ್ನು ಇನ್ನಷ್ಟು ಹಾನಿಗೆ ಒಳಪಡಿಸುವದು ನ್ಯಾಯವೇ? ನೀವೇ ಯೋಚಿಸಿ"

ಪತ್ರಗಳು ಎಲ್ಲಿಂದ ಬಂದವು? ಎಂದು ತಿಳಿಯ ಕೂಡದು, ಎಂದು ಅವನ್ನೆಲ್ಲ ಬೆರಳಚ್ಚಿನಲ್ಲಿ ಮೂಡಿಸಿ, ಜೆ.ಪಿ. ಓದ ಅಂಚೆಗೆ ಸೇರಿಸುವ ವ್ಯವಸ್ಥೆ ಯನ್ನು ರಾಯರು ಮಾಡಿದರು ಈ ಪತ್ರಗಳಿಂದ ಏನಾದರೂ ಪರಿಣಾಮ ವಾಗಿದೆಯೋ ಎಂದು ಅರಿಯಲು ರಾಯರು ನನ್ನಷ್ಟೇ ಆತುರರಾಗಿದ್ದರು. ಅಂತೆಯೇ ಒಂದೆರಡು ವಾರ ಬಿಟ್ಟು ಈ ಅಂಗಡಿಗಳಿಗೆ ಭೇಟಿ ನೀಡಿದಾಗ, ನಮಗೆ ವಿಸ್ಮಯ ಕಾದಿತ್ತು. ಮುಹಮ್ಮದ್‌ಸಾಬರ ಕಾಡಿಗೆ–ಕುಂಕುಮಗಳ ಕಪಾಟಿಗೆ ಬೀಗ ಬಿದ್ದಿತ್ತು. ಶೆಟ್ಟರು ಅಕ್ಕಿ ತೂಗುವ ಸಹಾಯಕನನ್ನು ಉಪ್ಪು ಮಾರುವ ವಿಭಾಗಕ್ಕೆ ವರ್ಗಾಯಿಸಿದ್ದರು! ಕಲ್ಪತರುವಿನಲ್ಲಿ ಎಂದಿಗಿಂತ ಹೆಚ್ಚಿನ ಜಾಗರೂಕತೆ ಕಂಡು ಬಂದಿತು. 'ಚರ್ಮಶಿಲ್ಪ' ವಿಭಾಗದಲ್ಲಿ ಖಾದಿ ಭಂಡಾರದವರು, ಸರ್ಪ ಕಾವಲಿಟ್ಟು ಹೊರ ಹೋಗುವವರ ಕೈಚೀಲ ತಪಾಸಣೆ ಪ್ರಾರಂಭಿಸಿದ್ದರಿಂದ ಈರ್ವರು ಕಳ್ಳರು ಸಿಕ್ಕಿಹಾಕಿಕೊಂಡಿದ್ದರಂತೆ! ರಾಯರು ಮಾನವ ವ್ಯಾಪಾರಗಳನ್ನೆಲ್ಲ ಕಾಕ ದೃಷ್ಟಿಯಿಂದ ವೀಕ್ಷಿಸುವದು ಇತರರಿಗೆ ಎಷ್ಟೊಂದು ಪ್ರಯೋಜನಕಾರಿಯಾಗ ಬಲ್ಲದು ಎಂದು ಸೋಜಿಗ ಪಡುವಂತಾಯ್ತು. ತಮ್ಮ ಚಿಕಿತ್ಸಕ ಬುದ್ಧಿಗೆ ಅಜ್ಞಾತ ಆದರೆ, ಸಾಮಾಜಿಕ ಬೆಲೆ ಇದೆ, ಎಂದರಿತ ರಾಯರು ಪತ್ರ ಲೇಖನ ಮುಂದುವರಿಸಿದರು.

ಸ್ವಸಹಾಯ ಪದ್ಧತಿಯ 'ಸುರುಚಿ ದರ್ಶಿನಿ' ಅಲ್ಪೋಪಹಾರದ ಅಂಗಡಿಗೆ ಬರೆದ ಪತ್ರ ಹೀಗಿತ್ತು. 'ಸ್ವಾಮಿ, ! ಗಿರಾಕಿಗಳು ತಮ್ಮ ಅಂಗಡಿಯ ಇಡ್ಲಿ-ವಡೆಗಳನ್ನು ತಿಂದು ಆನಂದಿಸಬಹುದೇ ಹೊರತು ಅವುಗಳಲ್ಲಿ ಹೇರಳವಾಗಿ ದೊರೆಯುವ ಕಲ್ಲು-ಮಣ್ಣು ಅಲ್ಲ ! ರೇಶನ್ ಅಂಗಡಿಯಿಂದ ಕಡಿಮೆ ಬೆಲೆಗೆ ಪಡೆಯುತ್ತೀರೇನೋ ನಿಜ ! ಅದನ್ನು ಸ್ವಚ್ಛಗೊಳಿಸಿದ ನಂತರವೇ ಇಡ್ಲಿಗಳಿಗಾಗಿ ಬಳಸುವ ಕೃಪೆ ಮಾಡುವಿರಾ ?' ಎದುರಿನಲ್ಲಿ ಈಗ 'ಪ್ರಿಯದರ್ಶಿನಿ' ಸುರುವಾಗಿದೆಯಷ್ಟೇ ನೆನಪಿಡಿ !" ಹೋಟೆಲ್ ಚಂದ್ರಕಾಂತ್‌ಗೆ ಬರೆದದ್ದು. 'ಹಿಂದೊಮ್ಮೆ ತಮ್ಮ ಉದ್ದಿನ ವಡೆಗಳಿಗೆ ಸಾಟಿಯಿಲ್ಲದೇ ಬಿಸಿಬಿಸಿ, ಗರಿಗರಿ ವಡೆಗಳಿಗೆ ಜೇನ್ನೊಣಗಳಂತೆ ಗಿರಾಕಿಗಳು ಮುತ್ತುತ್ತಿದ್ದರು. ಈಗಿನ ದಿನಗಳಲ್ಲಿ ನೀವು ಅವುಗಳ ರುಚಿ ನೋಡಿದ್ದೀರ? ಮೊಸರೊಡೆ ಮಾಡಲು ಲಾಯಕ್ಕಾಗುವಷ್ಟು ತಣ್ಣಗೆ ಅದಕ್ಕೆ ಹಾಕಿದ ಹರಳುಪ್ಪು ಕರಗಿರುವದಿಲ್ಲ ಕೂಡ.' 'ಕೃಷ್ಣ ವಿಲಾಸ್'ಗೆ ಕಳಿಸಿದ ಕಿವಿ ಮಾತುಗಳಿವು. 'ಇಂದಿನ ದಿನಗಳಲ್ಲಿ ನಿಮ್ಮ ಮಸಾಲೆ ದೋಸೆಗಳು. ಬಂದ ಗಿರಾಕಿಗಳನ್ನು ತೃಪ್ತಿಗೊಳಿಸುವದರಲ್ಲಿ ವಿಫಲಗೊಂಡಿವೆ ! ದೋಸೆಯ ಆಕಾರ ಸಣ್ಣದಾಗುತ್ತ ನಡೆದಿದ್ದು ಆಲೂಗಡ್ಡೆ ತುಂಡುಗಳು ದೊಡ್ಡ ಆಕಾರ ತಾಳಲಾರಂಭಿಸಿವೆ. ಅವುಗಳಿಗೆ ಉಪ್ಪು ಮಸಾಲೆ ಸರಿಯಾಗಿ ಹತ್ತಿರುವದಿಲ್ಲ. ಕೆಲಬಾರಿ ಬೆಂದಿರುವದಿಲ್ಲ ಕೂಡ. ಈ ದೋಸೆಗಳ ಸ್ಥಿತಿಗತಿಯನ್ನು ಪರಾಂಬರಿಸುವಂಥ ವರಾಗಬೇಕು.' ಜನತಾ ರೆಸ್ಟೋರೆಂಟಿಗೆ ನೀಡಿದ ಸಮರ್ಥುಾಯಿಸಿ ಹೀಗಿತ್ತು. "ಕಳೆದ ಎರಡು ದಶಕಗಳಿಂದ ನಿಮ್ಮ ಸಾಂಬಾರ್ ರುಚಿಗೆ ಮನಸೋತು ಬರುತ್ತಿರುವವರಲ್ಲಿ ನಾನೊಬ್ಬ. ಇಡ್ಲಿ ಸಾದಾ ದೋಸೆಗಳ ಜೊತೆಗೆ ಸಾಂಬಾರನ್ನೇ ಕೇಳಿ ಪಡೆಯುತ್ತಿರುತ್ತೇನೆ. ಗಂಟಲಿನ ನೋವು ಶೀತದಿಂದಾಗಿ ಮೂಗು ಗಂಟಲು ಕಟ್ಟಿಕೊಂಡಾಗ ಈ ಸಾಂಬಾರ್ ಕೊಟ್ಟ ನೆಮ್ಮದಿ ಅಷ್ಟಿಷ್ಟಲ್ಲ. ಆದರೆ ದುರ್ದೈವದಿಂದ ಈ ಘಟನೆಗಳೆಲ್ಲ ಇತಿಹಾಸಕ್ಕೆ ಸೇರಿವೆ. ಇಂದಿನ ದಿನಗಳಲ್ಲಿ ಈ ಸಾಂಬಾರ್‌ನ್ನು ಹಿಂದಿನ ರಾತ್ರಿಯೇ ತಯಾರಿಸಿ ಫ್ರಿಜ್ ಅಥವಾ ಹವಾನಿಯಂತ್ರಿತ ಕೋಣೆಯಲ್ಲಿಡುತ್ತಿರಲ್ಲವೇ ? ಅಂತೆಯೇ ಮೊದಲ ಬಟ್ಟಲು ಸಾಂಬಾರ್ ತಣ್ಣಗಿದ್ದರೆ, ಎರಡನೆಯದು ಅರೆಬಿಸಿ, ನಂತರದ್ದೂ ಕವಳಾ ತಾಯೀ ! ಎಂದು ಕೂಗುವವರಿಗೆ ನೀಡುವ ಮಟ್ಟ

ತಾಳಿರುತ್ತದೆ. ನಿಮಗೆ ಇಂಥ ದೂರುವ ಗಿರಾಕಿಗಳು ಬೇಕಾಗಿರಲಿಕ್ಕಿಲ್ಲ. ಆದರೆ ಗಿರಾಕಿಗಳು ಉತ್ತಮ ಸಾಂಬಾರದ ಪೂರೈಕೆಯನ್ನು ಹುಡುಕಿಕೊಂಡು ಕಾಯಂ ಹೊರಟು ಹೋಗುತ್ತಾರೆಂಬುದನ್ನು ನೀವು ಮರೆಯುವಂತಿಲ್ಲ.'

ನೆರೆ ಹೊರೆಯವರ ಕೆಲಸದಾಳುಗಳ, ಕಾರ್ಯಬಾಹಿರ ಚಟುವಟಿಕೆಗಳನ್ನು ರಾಯರು ತುಂಬ ಸೂಕ್ಷ್ಮವಾಗಿ ಗಮನಿಸುತ್ತಿರುತ್ತಾರೆ. ಅಂತೆಯೇ ಅವರ ಒಡತಿಯರಿಗೆ ಬರೆಯಲಾರಂಭಿಸಿದರು. "ಆನಂದಮ್ಮನವರೇ, ಹೊರ ಕೆಲಸದಾಕೆಯನ್ನು ಬಿಡುವಿಲ್ಲದ ತಾವು ನೇಮಿಸಿರುವದು ನ್ಯಾಯವೇ ಆಗಿದೆ. ಆದರೆ ಅವಳ ವರ್ತನೆಯನ್ನು ಲಕ್ಷವಿಟ್ಟು ಗಮನಿಸಿರುವಿರ ? ನಿನ್ನೆ ಮಧ್ಯಾಹ್ನದ ಘಟನೆ ನೋಡಿ. ನೀವು ಪ್ಲಾಸ್ಟಿಕ್ ಬಕೆಟ್‌ದಲ್ಲಿ ಗೋದಿ ಹಾಕಿ ಬೀಸಿಸಿಕೊಂಡು ಬರಲು ಕಳಿಸಿದ್ದೀರಲ್ಲವೇ ? ದಾರಿಯಲ್ಲಿ ಆ ಕೆಂಪಮ್ಮ ಸಿಕ್ಕಿದಳು. ಹರಟೆಗೆ ನಿಂತಳು. ನಂತರ ಅವಳ ಗೆಳೆಯ ಆಟೋ ಚಾಲಕ, ಮುನಿರಾಜುವನ್ನು ಕೂಗಿ ಕರೆದಳು. ರಿಕ್ಷಾದಲ್ಲಿ ಕುಳಿತು ಅವನೊಡನೆ ಪಿಸು ಮಾತು ನಡೆಯಿತು. ನಂತರ ಹಣ್ಣು ಕಾಫಿ ಸೇವನೆಯಾಯಿತು. ಅಷ್ಟರಲ್ಲಿ ಅವನಿಗೆ ಗಿರಾಕಿ ಸಿಕ್ಕಿದ್ದರಿಂದ ಅವಳು ಆಟೋದಲ್ಲೇ ಗಿರಣಿಗೆ ಹೋಗುವ ಪ್ಲಾನು ಹುಸಿಯಾಯಿತು. ಈಗ ಅವಸರದಿಂದ ಹೊರಟಾಗ, ಮುಗ್ಗರಿಸಿ ಬಿದ್ದು ಗೋದಿ, ಬೀದಿ ಪಾಲಾಗಿ ಹೋಯಿತು. ಅದೇ ಗೋದಿಯನ್ನು ಕೊನೆಗೊಮ್ಮೆ ಹಿಟ್ಟು ಮಾಡಿಸಿಕೊಂಡು ಹಿಂದಿರುಗುವಾಗ, ನೆಲಕ್ಕುರುಳಿದ ಗೋದಿಯನ್ನು ಆರಿಸಲು ನೆರವು ಮಾಡಿದವಳಿಗೆ ಅರ್ಧ ಕಿಲೋ ಆಗುವಷ್ಟು ಹಿಟ್ಟನ್ನೇ ದಾನ ಮಾಡಿ ನಿಮ್ಮ ಮನೆಗೆ ಹಿಂದಿರುಗಿದಳು. ವಿಳಂಬವಾಗಿ ಹಿಂದಿರುಗಿದ್ದಕ್ಕೆ ಏನು ಕಾರಣ ಕೊಟ್ಟಳೋ ತಿಳಿಯದು. ಆದರೆ ಕೆಟ್ಟ ಗೋದಿ ಕೊಟ್ಟನೆಂದು ಅಂಗಡಿಯವನನ್ನು ದೂರಬೇಡಿ !"

'ಜಾನಕಮ್ಮನವರೇ, ಅನಾಥೆಯೊಬ್ಬಳನ್ನು ಕರೆತಂದು ಮಮತೆಯಿಂದ ನೀವು ಬೆಳೆಸಿದ್ದು ನಿಜ. ಮೊಗ್ಗಾಗಿದ್ದ ಗುಲಾಬಿ ಅರಳಲಾರಂಭಿಸಿದೆ ! ನೆರೆಮನೆಯವರಿಗೆಲ್ಲ ನೀವು ಎಷ್ಟು ಸಣ್ಣ ಮನಸ್ಸಿನವರು ಎಂದು ಇಲ್ಲದ್ದನ್ನೆಲ್ಲ ರಂಗು ರಂಗಾಗಿ ವರ್ಣಿಸುತ್ತಾಳೆ. ಸಾಲದ್ದಕ್ಕೆ ನೀವಿಲ್ಲದಾಗ ತನ್ನ ಸಂಬಂಧಿ

ಯೆಂದು ಯುವಕನೊಬ್ಬನನ್ನು ಮನೆ ಸೇರಿಸಿಕೊಳ್ಳುತ್ತಾಳೆ. ಅವಳ ಚಟುವಟಿಕೆಗಳ ಮೇಲೆ ನಿಗಾ ಇಡಿ!'

ವಿವಿಧ ಸಾರ್ವಜನಿಕ ಸಂಸ್ಥೆಗಳ ಕಾರ್ಯ ವೈಖರಿಯಲ್ಲಿ ಆಳವಾದ ಆಸಕ್ತಿ ರಾಯರಿಗಿರುವದರಿಂದ ಮೇಲಧಿಕಾರಿಗಳಿಗೆ ಪತ್ರ ಬರೆಯುವದು ಸುಲಭವಾಯಿತು. "ಕರ್ನಾಟಕ ವಿದ್ಯುತ್ ಇಲಾಖೆಯ....ಅಧಿಕಾರಿಗಳಿಗೆ ವಂದನೆಗಳು. ತಮ್ಮ ಕ್ಯಾಶ್ ಕೌಂಟರ್ ಮೇಲೆ ತೂಗ ಹಾಕಿದ ಫಲಕ ಕೆಲಸದ ವೇಳೆ ಮುಂಜಾನೆ ಎಂಟುವರೆಯಿಂದ ಹನ್ನೆರಡುವರೆಯುವರೆಗೆ ಎಂದು ಸೂಚಿಸುತ್ತದೆ. ಆದರೆ ಗುಮಾಸ್ತೆ ಮೇಡಂ, ಒಂಭತ್ತು ಹೊಡೆದರೂ ಬಂದಿರುವದಿಲ್ಲ. ಆದ್ದರಿಂದ ಈ ಕೆಲಸದ ವೇಳೆ ಸಾಲಾಗಿ ಕಾದು ನಿಲ್ಲುವ ಗ್ರಾಹಕರಿಗೆ ಅನ್ವಯಿಸುತ್ತದೆಯೇ ಹೊರತು ಇಲಾಖೆಯ ಸಿಬ್ಬಂದಿಗೆ ಅಲ್ಲ, ಎಂದು ತೀರ್ಮಾನಿಸಬಹುದೇ?" ರಾಷ್ಟ್ರೀಕೃತ ಬ್ಯಾಂಕ್ ಮ್ಯಾನೇಜರರಿಗೆ ಬರೆದ ಓಲೆ. "ಸಾರ್ವಜನಿಕರ ಹಿತದೃಷ್ಟಿಯಿಂದ ಮುಂಜಾನೆ, ಸಂಜೆ ಕೆಲಸ ಮಾಡುವದನ್ನು ಕೈ ಬಿಟ್ಟು ಒಂಭತ್ತರಿಂದ ಒಂದು ಗಂಟೆಗೆ ತೆರದಿರುತ್ತದೆ ಎಂದು ಸಾರುತ್ತ ಸಿಬ್ಬಂದಿಯ ಅನುಕೂಲಕ್ಕೆ ಹೊಂದುವಂತೆ ವೇಳೆ ಬದಲಾಯಿಸಿದಿರಿ. ಸಂತೋಷ! ಆದರೆ ಕೆಲಸದ ಪ್ರಮಾಣ ತೀರ ಜಾಸ್ತಿ, ಸಂಬಳವಂತೂ ವಿಪರೀತ ಕಡಿಮೆ ಪಡೆಯುವ ಬ್ಯಾಂಕ್ ಕಾರ್ಮಿಕರು ಕೆಲಸದ ದಣಿವಿನಿಂದ ಚೇತರಿಸಿಕೊಳ್ಳದೇ ಒಂಭತ್ತು ಗಂಟೆಗೆ ಇನ್ನೂ ಮನೆಯಲ್ಲಿ ಇರುವದು, ಪ್ರತಿಯೊಬ್ಬ ಗ್ರಾಹಕನ ಅನುಭವ. ಆನಂತರ ಸಾರ್ವಜನಿಕವೆನಿಸಿಕೊಳ್ಳುವ, ಹತ್ತಿಸಿಕೊಳ್ಳಲು ಸಿದ್ಧವಿರುವ ಬಸ್ಸಿನಿಂದಲೋ ಹೊರಡಲು ನಿರಾಕರಿಸುವ ಸ್ವವಾಹನವನ್ನು ಹತ್ತಿಯೋ ಅಂತು ಬ್ಯಾಂಕಿಗೆ ಬಂದು, ಮನೆಯಿಂದ ತಂದ ನಾಶ್ತಾವನ್ನು ಸಿಬ್ಬಂದಿಯವರು ಕೌಂಟರ ಮೇಲೆಯೇ ಸ್ವಾಹಾ ಮಾಡಲು ಪ್ರಾರಂಭಿಸುವರು. ಗೃಹಬಲ ಚೆನ್ನಾಗಿಲ್ಲದವರು ಹತ್ತಿರದ ಹೊಟೇಲಿನಿಂದ ತಿಂಡಿ ತರಿಸದೇ ಇರುವದಿಲ್ಲ. ಹೋಗಲಿ, ಗಿರಾಕಿಗಳಿಗೆ ಅವರವರ ಖರ್ಚಿನಲ್ಲಿಯೇ ನಾಶ್ತಾ ಪೂರೈಸುವ ವ್ಯವಸ್ಥೆಯನ್ನು ನಿಂತಲ್ಲಿಯೇ ಏರ್ಪಡಿಸಿದ್ದರೆ, ಅವರು ಜೊಲ್ಲು ಸುರಿಸುತ್ತ, ನೋಡುತ್ತ, ಗಂಟೆಗಟ್ಟಲೆ ಕಾಯುವ ಪ್ರಮೇಯ ತಪ್ಪುತ್ತಿರಲಿಲ್ಲವೇ?" ಸಾರಿಗೆಯ ಪ್ರಧಾನ

ಅಧಿಕಾರಿಗೆ, ಪ್ರಯಾಣಿಕರಿಗೆ ಸಕಲ ಸೌಕರ್ಯಗಳನ್ನು ಪೂರೈಸಿ, ತಾವು ಎಳ್ಳಷ್ಟು ಪ್ರತಿಫಲಕ್ಕೆ ಆಶಿಸದೇ, ಸೇವೆ ಸಲಿಸುವದೇ ಮಹಾ ಭಾಗ್ಯವೆಂದು ನಂಬಿರುವ ಅಥವಾ ಸಾರುವ ಸಾರಿಗೆಯು ಸಂಸ್ಥೆಯ ಹಿರಿಯ ಅಧಿಕಾರಿಗೆ ಬರೆದ ಪತ್ರದ ಒಕ್ಕಣಿಕೆ "ವರಿಷ್ಠ ಅಧಿಕಾರಿಗಳಿಗೆ ವಂದನೆಗಳು. ಅಮೇರಿಕನ್ನರಿಗೂ ಲಭ್ಯವಿರದ ಸೌಕರ್ಯಗಳನ್ನು ನಮಗೆಲ್ಲ ಕೊಡಮಾಡಿರುವದು, ತಮ್ಮಗಳ ಎಣೆಯಿಲ್ಲದ ಔದಾರ್ಯದ ಮಾದರಿ! ಕಂಪ್ಯೂಟರ ಮೂಲಕ ಮುಂದಾಗಿ ಸ್ಥಳ ಕಾದಿರಿಸುವ ಏರ್ಪಾಡು ಜಯನಗರ, ಮಲ್ಲೇಶ್ವರಂ ಗಳಿಗೆ ಕೊಡ ಮಾಡಿರುವದಂತೂ ಅದ್ಭುತ ಸಾಧನೆಯೇ ಸೈ! ಆದರೆ ಈ ಕಂಪ್ಯೂಟರ ಗಳು ಮತ್ತು ಆದರ ಚಾಲಕರು ಕಾಯಂ ನಾದುರುಸ್ತಿಗೆ ಒಳಗಾಗಿ, ಚಹಾ ಕಾಫಿ ಸವಿಯುತ್ತಲೋ ಧೂಮ್ರಪಾನ ಮಾಡುತ್ತಲೋ, ಇರುವದು, ನಿಮ್ಮ ಹೊಸ ಅಭಿವೃದ್ಧಿಯ ಭಾಗವೇ? ಎಂಬುದನ್ನು ಖಾವಂದರು ಖಚಿತ ಪಡಿಸುವ ಕೃಪೆ ಮಾಡಬೇಕು."

ಅತ್ಯಾಧುನಿಕರೆನಿಸಿಕೊಳ್ಳುವವರು ಫ್ಯಾಶನ್ ಹೆಸರಿನಲ್ಲಿ ಮಂಗ್ಯಾತನ ಮಾಡುತ್ತ, ಅಲೆಯುತ್ತ ಇರುವದನ್ನು ರಾಯರು ಪತ್ರ ಮೂಲಕ ಖಂಡಿಸುತ್ತಲೇ ಬಂದಿದ್ದಾರೆ. ನೆರೆಮನೆಯ ಹಿಡಂಬಿಗೆ, "ನಾವೆಲ್ಲ ಮನುಷ್ಯ–ಪ್ರಾಣಿಗಳು ಹುಟ್ಟುವಾಗ ಪ್ರಮಾಣ ಬದ್ಧವಾಗಿಯೇ ಇರುತ್ತೇವೆ. ಆ ಪ್ರಮಾಣಕ್ಕೆ ವ್ಯತ್ಯಯ ಬರುವಂತೆ ನಡೆದುಕೊಂಡರೆ ಮಾತ್ರ ಅನಾಕರ್ಷಕವಾಗಿ ಬಿಡುತ್ತೇವೆ. ಕಿಪ್ಪೊಟ್ಟೆ, ಸೊಂಟಗಳು ಮಾತ್ರ ಹಿಗ್ಗುವಂತೆ ಬಾಯಿ ಚಪಲದ ಆಹಾರವನ್ನು ಸೇವಿಸಿ, ಕಣ್ಣು ರೆಪ್ಪೆ ಹುಬ್ಬುಗಳ ಕಡೆಗಷ್ಟೆ ಗಮನ ನೀಡಿ ಕಿರಿದಾಗಿಸಿದರೆ ಇನ್ನಿತರರಿಗೆ ಹೇಗೆ ಕಾಣಿಸುತ್ತೇವೆ? ಎಂಬುದನ್ನು ನಿಲುವುಗನ್ನಡಿಯೆದುರು ನಿಂತುಕೊಂಡು ಸ್ವಂತ ವಿಮರ್ಶೆ ಮಾಡಿಕೊಳ್ಳಬೇಕು. ಮೈಗೆ ಅಂಟುವ ಬಟ್ಟೆಗಳು, ಊನಗಳನ್ನೆ ಎತ್ತಿ ತೋರಿಸುತ್ತವೆ. ನಾಲಿಗೆ ರುಚಿ ನಿಯಂತ್ರಿಸಿ, ತೂಕ ಕಡಿಮೆ ಆಗುವ ತನಕ ಸಕಲ ಊನಗಳನ್ನು ಮರೆ ಮಾಚುವ ಸೀರೆಗೆ ಶರಣು ಹೋಗುವದು ಲೇಸಲ್ಲವೇ?" ಎಂದು ಬರೆದರು.

ಅಂದು ಮುಂಜಾನೆ ವೃತ್ತ ಪತ್ರಿಕೆ ಓದುತ್ತಿದ್ದ ರಾಯರು ತುಂಬ

ವಿಹ್ವಲರಾಗಿದ್ದಂತೆ ಕಂಡು ಬಂದರು. ಪರಿಪರಿಯಾಗಿ ಕಾರಣವನ್ನು ಕೇಳಿದರೂ ಉತ್ತರಿಸದೇ ದೊಡ್ಡ ನಿಟ್ಟುಸಿರೊಂದನ್ನು ಹೊರ ಹಾಕಿದರು. ಪತ್ರಿಕೆಯಲ್ಲಿ ಅವರನ್ನು ಚಿಂತೆಗೊಳಪಡಿಸಿದ ಯಾವ ಸಮಾಚಾರವೂ ಕಾಣಿಸಲಿಲ್ಲ. ಒಂದೆಡೆ ಮಾತ್ರ ಓರ್ವ ಗೃಹಿಣಿ ಮತ್ತು ಹದಿ ಹರೆಯದ ಅವಳ ಮಗಳನ್ನು ಅಮಾನುಷ ರೀತಿಯಲ್ಲಿ ಕೊಲೆ ಮಾಡಿದ್ದರ ವರದಿ ಮಾಡಲಾಗಿತ್ತು. ಆದರೆ ಬೆಂಗಳೂರಿನವರಿಗೆ ಅದೇನೂ ಹೊಸ ಸುದ್ದಿಯಾಗಿರಲಿಲ್ಲ, ಮರು ದಿನವೂ ಕೊಲೆಗಡಿಕನಾರು ? ಎಂದು ತಿಳಿಯಲಿಲ್ಲ. ಅಷ್ಟೆ ಅಲ್ಲ. ದುಷ್ಕೃತ್ಯದ ಹಿಂದೆ ಅಡಗಿದ ಉದ್ದೇಶವನ್ನು ಪೋಲಿಸರಿಂದ ಖಚಿತ ಪಡಿಸಲಾಗಿರಲಿಲ್ಲ. ಬೆಳ್ಳಿ, ಬಂಗಾರ ದೋಚಿರಲಿಲ್ಲ. ಯಾವ ರೀತಿಯ ಬಲಾತ್ಕಾರವನ್ನು ಮಾಡಿರಲಿಲ್ಲ. ಮೃತಳ ಪತಿಯ ಕೈವಾಡ ವಿದ್ದೀರಬಹುದೇ ? ಎಂದು ಗುಪ್ತಚಾರರು ತನಿಖೆ ನಡೆಸುತ್ತಿದ್ದಾರೆ, ಎಂದು ವರದಿಯಾಗಿತ್ತು.

ಇದಾದ ಎರಡೇ ದಿನಗಳಲ್ಲಿ ನನ್ನ ಹೆಸರಿಗೇ ಒಂದು ಅನಾಮಧೇಯ ಪತ್ರ ಬಂದಿತು. ಅದರ ಒಕ್ಕಣಿಕೆ ಹೀಗಿತ್ತು. "ಮೇಡಮ್ ನಿಮ್ಮ ಯಜಮಾನರು, ಸದಾಕಾಲ ಇನ್ನಿತರರ ವ್ಯವಹಾರದಲ್ಲಿ ತಲೆ ಹಾಕುವದು ಸರಿಯಲ್ಲ. ಅವರು ತಕ್ಷಣ ತಮ್ಮ ಈ ಚಟಕ್ಕೆ ತಡೆ ಹಾಕದಿದ್ದರೆ ಅವರ ಅಸ್ತಿತ್ವಕ್ಕೇ ಗಂಡಾಂತರ ಬಂದೀತು ! ನಿಮ್ಮ ಮೇಲಿನ ಅಭಿಮಾನದಿಂದ ಈ ಮುನ್ನೆಚ್ಚರಿಕೆ ಕೊಡುವ ಸ್ವಾತಂತ್ರ್ಯ ತೆಗೆದುಕೊಂಡಿದ್ದೇನೆ. ಕ್ಷಮಿಸಿ" ಪತ್ರ ಓದಿ ಮುಗಿಸುತ್ತಿದ್ದಂತೆ ಕೈಗಳು ನಡುಗ ಹತ್ತಿದವು. ಕಣ್ಣು ಮಂಜಾದವು. ಆಕಾಶವೇ ಕಳಚಿ ಬಿದ್ದಂತಾಗಿ ಮುಂದೇನು ಮಾಡಬೇಕು, ಎಂದು ತಿಳಿಯದಾಯಿತು. ಇವರಿಗೆ ಪತ್ರಗಳನ್ನು ಬರೆಯಲು ಪ್ರೋತ್ಸಾಹಿಸಲೇ ಬಾರದಿತ್ತು ! ಎಂದು ನನ್ನನ್ನೆ ಶಪಿಸಿ ಕೊಂಡೆ. ಈ ಪತ್ರ ಬರೆದವರು ಯಾರೆಂದು ಪತ್ತೆ ಹಚ್ಚುವದು ಸುಲಭ ಸಾಧ್ಯವಲ್ಲ. ರಾಯರನ್ನೇ ವಿಚಾರಿಸಲೇ ? ಅನಿಸಿತು. ತಕ್ಷಣ ಬೇಡ ನನ್ನಂತೆಯೇ ಅವರು ಮಾನಸಿಕ ಕ್ಲೇಶಕ್ಕೆ ಒಳಪಡುವದು ಬೇಡ ಅನಿಸಿತು. ಆದರೆ ಅಜ್ಞಾತ ಪತ್ರ ಲೇಖನನ್ನು ಕೊನೆಗಾಣಿಸಲೇ ಬೇಕೆಂದು ರಾಯರಿಗೆ ಕೇಳಿಕೊಂಡೆ. ಅವರು ತಕ್ಷಣ ಒಪ್ಪಿಕೊಂಡು ಬಿಟ್ಟರು !

ಮರುದಿನವೇ ಉಚ್ಚ ಪೋಲಿಸ್ ಅಧಿಕಾರಿಗಳಿಂದ ಪತ್ರ ಬಂದಿತು. ತಮ್ಮನ್ನು ಬಂದು ಕಾಣುವಂತೆ ರಾಯರನ್ನು ಕೇಳಿಕೊಳ್ಳಲಾಗಿತ್ತು. ರಾಯರು ಪತ್ರಕ್ಕೆ ಹೀಗೆ ಉತ್ತರಿಸಿದರು. "ನನಗೆ ನಿಮ್ಮಿಂದ ಯಾವ ಕೆಲಸವೂ ಆಗಬೇಕಾಗಿಲ್ಲ. ನಿಮಗೆ ನನ್ನಿಂದ ಏನಾದರೂ ಕೆಲಸ ವಾಗಬೇಕಿದ್ದರೆ ನೀವೇ ನಾನಿದ್ದಲ್ಲಿ ಬರಬೇಕಲ್ಲವೇ?" ಪೋಲಿಸರೊಂದಿಗೆ ಈ ಉದ್ಧಟತನ ಬೇಡ ಎಂದು ಎಷ್ಟು ಹೇಳಿದರೂ ರಾಯರು ಕೇಳಲಿಲ್ಲ. ತಮ್ಮ ನಿರ್ಧಾರಬದಲಿಸಲಿಲ್ಲ.

ಪತ್ರ ಪಡೆದ ಪೋಲಿಸ ಅಧಿಕಾರಿ, ರಾಯರಿಗೆ ಮಾಡಿದ ಫೋನ್ ಕರೆಗೆ ಎಂದಿನಂತೆ ನಾನೆ ಉತ್ತರಿಸಬೇಕಾಯಿತು. ನಮ್ಮ ಮನೆಯ ಬೆರಳ ಚ್ಚಿನ ಯಂತ್ರವನ್ನು ಪರೀಕ್ಷಿಸಲು ಮತ್ತು ಹೆಚ್ಚಿನ ಕೆಲ ಮಾಹಿತಿ ಪಡೆಯಲು ಸಹಾಯಕರೊಬ್ಬರನ್ನು ಕಳಿಸುವದಾಗಿಯೂ ಅವರೊಡನೆ ಸಂಪೂರ್ಣ ಸಹ ಕರಿಸಬೇಕಾಗಿಯೂ ಅವರ ಕೋರಿಕೆಯಾಗಿತ್ತು. ಅದರಂತೆ ಅಧಿಕಾರಿಗಳು ಬಂದರು. ಜೊತೆಯಲ್ಲಿ ತಂದ ಹಾಳೆಯಲ್ಲಿ ಬೆರಳಚ್ಚಿಸಿಕೊಂಡು, 'ನಿಮ್ಮ ಯಜಮಾನರು ದಿನಚರಿಯನ್ನು ಬರೆಯುತ್ತಾರೆಯೇ?' ಎಂಬ ಪ್ರಶ್ನೆಗೆ, "ಹೌದು" ಎಂದು ಉತ್ತರ ಪಡೆದು ಹೊರಟೇ ಬಿಟ್ಟರು. ಈ ಘಟನೆಯಿಂದ ದುಗುಡ ಹೆಚ್ಚಿತು. ರಾಯರಿಂದ ಮಾಹಿತಿ ಪಡೆಯೋಣವೆಂದರೆ ಇದ್ದಕ್ಕಿ ದ್ದಂತೆ ಅವರು ನಾಪತ್ತೆ! ಮರುದಿನ ಪೋಲಿಸ ವರಿಷ್ಠ ಅಧಿಕಾರಿಗಳಿಂದ ತಿರುಗಿ ಫೋನ ಕರೆ. "ಬರುವ ಸೋಮವಾರ ನೀವಿಬ್ಬರೂ ನಮ್ಮ ಮುಖ್ಯ ಕಚೇರಿಗೆ ಬರಲೇ ಬೇಕು. ಒಂದಾನು ವೇಳೆ ನಿಮ್ಮ ಯಜಮಾನರು ಬರದಿ ದ್ದರೆ, ನೀವಾದರೂ ಬರಲೇಬೇಕು." ಎಂದು ವಿನಯ ಪೂರ್ವಕವಾಗಿ ಆದರೆ ಖಚಿತವಾಗಿ ಹೇಳಿದರು.

ಪೋಲಿಸ ಕಚೇರಿಯಲ್ಲಿ ಏನೇನು ಕೇಳುವರೋ! ಅಲ್ಲಿ ಏನೇನೂ ಕಾದಿ ದೆಯೋ ಎಂದು ತೀವ್ರವಾದ ಕಳವಳ ಪ್ರಾರಂಭವಾಯಿತು. ರಾಯರು ಅದೃಶ್ಯರಾಗಿ ನಾಲ್ಕು ದಿನವಾಗಿತ್ತು. ಕ್ಯಾಮರಾ ಹಿಡಿದು ಕಾಡಿಗೋ ದೂರದರ್ಶಕ ಹಿಡಿದು ಬೆಟ್ಟಕ್ಕೋ ಹೋಗಿ ಬಿಡುವದು ಅವರಿಗೆ ರೂಢಿ

ಯಾಗಿತ್ತು. ಈಗ ಏನೂ ಹೇಳದೇ ಅಜ್ಞಾತ ವಾಸಕ್ಕೇ ಹೋಗಿದ್ದರು. ನನಗಂತೂ ಬೆನ್ನಟ್ಟಿದ ಕರ್ವ್ಯ, ಎಂದು ಕಾನೂನು ಪಾಲಕರನ್ನು ಹುಡುಕಿಕೊಂಡು ಹೋದೆ. ರಾಜ್ಯೋತ್ಸವದಂಥ ಯಾವುದೋ ಸಮಾರಂಭ ಅಲ್ಲಿಯ ಆವರಣದಲ್ಲಿ ಅಣಿಯಾಗಿತ್ತು. ಓರ್ವ ಪೇದೆಗೆ, "ತುರ್ತಾಗಿ ಸಾಹೇಬರನ್ನು ಕಾಣಬೇಕಾಗಿತ್ತು" ಎಂದಾಗ ಅದೆಲ್ಲಾ ಆಗಾಕಿಲ್ಲ. ಅವರು ವಿಪರೀತ ಬ್ಯುಸಿ ಎಂದು ಹೊರಡುವದರಲ್ಲಿದ್ದವನಿಗೆ, ನನ್ನ ಕಾರ್ಡು ಕೊಟ್ಟು ಅವರ ಕಾರ್ಯದರ್ಶಿಗೆ ತಲುಪಿಸಲು ಹೇಳಿದೆ. ಅದನ್ನು ಕೈಯಲ್ಲಿ ಹಿಡಿದೇ ನಗು ನಗುತ್ತ ದೂರದಿಂದಲೇ ನಮಸ್ಕರಿಸುತ್ತ ಬಂದ ದೊಡ್ಡ ಸಾಹೇಬರನ್ನು ಕಂಡು ಸಿಬ್ಬಂದಿಯೆಲ್ಲ ದಂಗಾಗಿ ಹೋಯಿತು. "ಇಲ್ಲೆ ಏಕೆ ನಿಂತು ಬಿಟ್ಟಿರಮ್ಮ? ನೇರ ಚೇಂಬರಿಗೇ ಬಂದರೆ ಆಗುತ್ತಿರಲಿಲ್ಲವೇ ? ಇಂದಿನ ಸಮಾರಂಭಕ್ಕೆ ನೀವೇ ಅತಿಥಿಗಳು!" ಎಂದು ಆದರದಿಂದ ಬರಮಾಡಿಕೊಂಡಾಗ ಏನೂ ಅರ್ಥವಾಗಲಿಲ್ಲ.

ಪೆಂಡಾಲಿಗೆ ಕರೆದೊಯ್ದು ಅಧಿಕಾರಿಗಳು ವೇದಿಕೆಯ ಮೇಲೆ ಕುಳ್ಳಿರಿಸಿದರು. ನೆರೆದವರೆಲ್ಲ ತಕ್ಷಣ ಮಾತು ನಿಲ್ಲಿಸಿದರು. ಉಚ್ಚ ಅಧಿಕಾರಿಗಳು ಪ್ರಾರಂಭಿಸಿದರು. "ನನ್ನ ವೃತ್ತಿ ಜೀವನದಲ್ಲಿ ಇದೊಂದು ಅತ್ಯಾನಂದದ, ಆಶ್ಚರ್ಯದ ದಿನ. ಶಾಲಾ-ಕಾಲೇಜ ವಿದ್ಯಾರ್ಥಿಯಾಗಿದ್ದಾಗಿನಿಂದ ಡಾ|| ಕೃಷ್ಣಾನಂದ ಕಾಮತರ ಪುಸ್ತಕಗಳನ್ನು ಓದುತ್ತ ಬೆಳೆದಿದ್ದೇನೆ. ಅವರನ್ನು ಒಮ್ಮೆ ಕಂಡು ಮಾತನಾಡಿಸಬೇಕೆಂಬ ಕನಸು ಇನ್ನೂ ನನಸಾಗಿಲ್ಲ! ಹೀಗಾಗಿ ಅವರ ಶ್ರೀಮತಿಯವರನ್ನು ಬರಮಾಡಿಕೊಂಡಿದ್ದೇವೆ. ಕಾಮತರ ಬಹುಮುಖ ಪ್ರತಿಭೆಯ ಪರಿಚಯವಿದ್ದರೂ ಇನ್ನೊಂದು ಅತಿ ಮುಖ್ಯ ಪ್ರತಿಭೆಯ ಪರಿಚಯ ಈಗ ಆಗಿದೆ. ಅವರು ಬಲು ದೊಡ್ಡ ಸಮಾಜ ಸೇವಕರು! ಆದರೆ ಅದು ಎದ್ದು ತೋರುವ ಸೇವೆ ಅಲ್ಲವೇ ಅಲ್ಲ! ಇಂದಿನ ದಿನಗಳಲ್ಲಿ ಬೆಂಗಳೂರಿನ ಅನೇಕಾನೇಕ ನಾಗರಿಕರು ತಮಗೆ ಯಾರೋ ಅಜ್ಞಾತರು ಪತ್ರ ಬರೆಯುತ್ತಿದ್ದು ಅದರಿಂದ ಅನೇಕ ಅನಾಹುತಗಳು ತಪ್ಪಿವೆ ಎಂದು ಅರಿಕೆ ಮಾಡಿಕೊಂಡಿದ್ದರು. ಪೌರಪ್ರಜ್ಞೆಯನ್ನು ಬೆಳೆಸಿದ ಈ ಮಹಾನುಭಾವರನ್ನು ದಯವಿಟ್ಟು ಪತ್ತೆ ಹಚ್ಚಿ! ಅವರನ್ನು ನಾವೆಲ್ಲ ಸೇರಿ ಗೌರವಿಸುತ್ತೇವೆ

ಎಂದು ಒತ್ತಾಯಿಸುತ್ತಲೇ ಇದ್ದರು. ಅವರೇ ಚಂದಾ ಎತ್ತಿ ಈ ಕಾರ್ಯಕ್ರಮ ಆಯೋಜಿಸಿದ್ದಾರೆ ಕೂಡ! ಅವರ ಕೋರಿಕೆ ನೆರವೇರಿಸಲು ಮಾತ್ರ ಕೂಡಲೇ ಸಾಧ್ಯವಾಗಿರಲಿಲ್ಲ.

ಕಳೆದವಾರ ತಾಯಿ ಮಗಳ ಕಗ್ಗೊಲೆಯಾದ ವಿಚಾರ ನಾಗರಿಕರಂತೆ ಪೋಲಿಸರನ್ನೂ ತಲ್ಲಣಗೊಳಿಸಿತ್ತು. ಹೇಗೆ ಮುಂದರಿಯಬೇಕೆಂದು ತಿಳಿಯದೇ ಕಂಗಾಲ ಪರಿಸ್ಥಿತಿಯಲ್ಲಿ ಕೊಲೆಯಾದವಳ ಪತಿಗೆ ಅನಾಮಧೇಯ ಪತ್ರವೊಂದು ಬಂದಿತು. "ಸಿ. ಕೆ. ಎಲ್. 7879 ನಂಬರಿನ ಕರಿಯ ಸ್ಕೂಟರ ಚಾಲಕನು ನಿಮ್ಮ ಪತ್ನಿಯನ್ನು ಹಿಂಬಾಲಿಸುವದನ್ನು ಕಂಡಿದ್ದೆ" ಒಂದೇ ಸಾಲಿನ ಪತ್ರ ನಮ್ಮ ಖಾತೆಯವರಿಗೆ ಅಮೂಲ್ಯ ಸುಳುಹು ನೀಡಿತು. ಅಪಾದಿತನು ಕೂಡಲೇ ಬಂಧಿತನಾಗಲು ಸಾಧ್ಯವಾಯಿತು. ಈ ಪತ್ರ ಬರೆದಾತ ಯಾರು ? ಎಂದು ತನಿಖೆ ನಡೆಸಿದಾಗ, ಈ ವರೆಗೆ ಲೆಕ್ಕವಿಲ್ಲದಷ್ಟು ಜನರಿಗೆ ಬರೆದ ಅನಾಮಧೇಯ ಪತ್ರಗಳೆಲ್ಲ ಒಂದೇ ಬೆರಳಚ್ಚಿನ ಯಂತ್ರದಿಂದ ಟಂಕಿತವಾದವು ಮತ್ತು ಜಿ. ಪಿ. ಓ ದಿಂದ ಅಂಚೆಗೆ ಸೇರಿಸಿದವುಗಳು. ಎಂಬುದು ಪತ್ತೆ ಹತ್ತಿತು. ನಂತರ ಡಾ| ಕಾಮತರು ಪೋಲಿಸಠಾಣೆಗೆ ಬರುವ ಅಗತ್ಯ ತನಗೆ ಇಲ್ಲವೆಂದು ಕಳಿಸಿದ ಪತ್ರವೂ ಅದೇ ಬೆರಳಚ್ಚಿನಿಂದ ಮುದ್ರಿತವಾಗಿದ್ದರಿಂದ ಎಲ್ಲರ ಲಕ್ಷವೂ ಅವರತ್ತಲೇ ಕೇಂದ್ರಿಕೃತವಾಯಿತು. ಅವರಲ್ಲಿ ಹೋದ ತಜ್ಞರೂ ಇದನ್ನೇ ಖಚಿತ ಪಡಿಸಿದರು. ಗಣ್ಯ ನಾಗರಿಕರೆಲ್ಲ ತಮಗಾದ ಉಪಕಾರವನ್ನು ನೆನೆದು ಈ ಸತ್ಕಾರ ಕೂಟ ಏರ್ಪಡಿಸಿದರೆ ಅವರೇ ನಾಪತ್ತೆಯಾಗಿದ್ದಾರೆ! ಅವರಿಗೆ ಸಲ್ಲಬೇಕಾದ ಸನ್ಮಾನಗಳನ್ನು ಅವರ ಸಹ ಧರ್ಮಿಣಿಗೆ ಸಲ್ಲಿಸುತ್ತೇವೆ ಎಂದು ಫಲಪುಷ್ಪ ತಾಂಬೂಲ-ಶಾಲುಗಳ ಸಕಲ ಸನ್ಮಾನದೊಂದಿಗೆ ಹತ್ತು ಸಹಸ್ರ ರೂಪಾಯಿಗಳ ಚೆಕ್ ಕೊಡಮಾಡಿದಾಗ, ಇದು ಕನಸಿನ ಲೋಕವೇ! ಎಂದು ಕಣ್ಣು ತಿಕ್ಕಿಕೊಂಡು ನೋಡಿದೆ. ಉಪಕೃತರೆಲ್ಲ ಬಂದು ಮಾತನಾಡಿದ ಮೇಲೆ ನನಗೆ ಎರಡು ಮಾತು ಹೇಳಲೇ ಬೇಕೆಂದು ಅಧಿಕಾರಿಗಳು ಒತ್ತಾಯಪಿಸಿದ್ದರಿಂದ ತಡವರಿಸುತ್ತಲೇ ಪ್ರಾರಂಭಿಸಿದೆ. "ಈ ಉಚ್ಚ ಅಧಿಕಾರಿಗಳಿಂದಾಗಿ ನಮ್ಮ ರಾಯರು ತೆರೆಯ ಮರೆಯಿಂದಲೇ ಮಾಡುತ್ತಿದ್ದ ಅದ್ಭುತವಾದ ಕಾರ್ಯದ ಪರಿಚಯವಾಯಿತು.

ಪೋಲಿಸರು ಈ ಕುರಿತು ನಮ್ಮೊಡನೆ ಸಂಪರ್ಕ ಬೆಳೆಸಿದಾಗ, ಹೆದರಿ ಇನ್ನು ಮುಂದೆ ಯಾರಿಗೂ ಪತ್ರ ಬರೆಯಕೂಡದು, ಎಂದು ಅವರನ್ನು ಒಪ್ಪಿಸಿದ್ದೆ ಕೂಡ!...ಒಂದು ಗುಟ್ಟಿನ ಮಾತು ಹೇಳಬೇಕೆಂದರೆ ಈ ಅನಾಮಧೇಯ ಪತ್ರಗಳನ್ನು ಬರೆದೂ ಬರೆದೂ ಅವರಿಗೆ ಎಷ್ಟು ರೂಢಿಯಾಗಿದೆಯೆಂದರೆ ನನಗೂ ಇತ್ತೀಚೆಗೆ ಒಂದು ಅಂಥ ಪತ್ರ ಬಂದಿದೆ ಆದನ್ನೂ ರಾಯರು ಬೇರೊಂದು ಯಂತ್ರದ ಮೇಲೆ ಟ್ಯಾಪ್ ಮಾಡಿ ಕಳಿಸಿರಬೇಕು ಎಂಬ ಅನುಮಾನ ಇದ್ದೇ ಇದೆ!....ಎನ್ನುತ್ತಿದ್ದಂತೆ ಹೋ! ಎಂದು ಸಭಿಕರೆಲ್ಲ ನಕ್ಕು ಕರತಾಡನ ಮಾಡಿ ಮುಂದಿನ ಮಾತನ್ನೇ ಮರೆಸಿಬಿಟ್ಟರು.

# ಸೇವಕಿಯ ಸೇವೆ



ಸೇವಕಿಯೊಬ್ಬಳನ್ನು ನೇಮಿಸಿಕೊಳ್ಳುವ ಬಗ್ಗೆ ನಮ್ಮಲ್ಲಿ ಭಿನ್ನಾಭಿಪ್ರಾಯ ಸದಾ ಇದ್ದದ್ದೇ. "ನೋಡಿ, ನಮ್ಮಕ್ಕ ನೌಕರಿಗೆ ಹೋಗದಿದ್ದರೂ, ಅಡಿಗೆಯವಳನ್ನು, ಹೊರ ಕೆಲಸದವಳನ್ನು ನೇಮಿಸಿಕೊಂಡಿದ್ದಾಳೆ. ನಮಗಿಂತ ಕಡಿಮೆ ಉತ್ಪನ್ನ ಇರುವವರ ಮನೆಗಳಲ್ಲಿ ಮನೆಗೆಲಸಕ್ಕೆ ಒಬ್ಬರಾದರೂ ಸಹಾಯಕರು ಇದ್ದೇ ಇರುತ್ತಾರೆ. ಕೇಂದ್ರ ಸರಕಾರಿ ಅಧಿಕಾರಿಣಿಯಾಗಿ ದಿನದ 8–10 ತಾಸು ಹೊರಗೆ ಇರುವವಳಿಗೆ ಭಾಂಡಿ ತಿಕ್ಕುವ ಹುಡುಗಿಯ ನೆರವೂ ಇಲ್ಲವೆಂದರೆ ಶುದ್ಧ ಅವಮಾನ!" ಎಂದು ಚುಚ್ಚು ಮಾತು ಆಡಿದರೂ, ರಾಯರು ರೇಗದೇ, "ಪ್ರತಿಯೊಬ್ಬರಿಗೂ ತಮ್ಮ ತಮ್ಮ ಸಂಸಾರ ನಿರ್ವಹಣೆ ರೂಪಿಸಿಕೊಳ್ಳುವ ಸರ್ವ ಅಧಿಕಾರವಿದೆ. ಬಹುಶಃ ನಿನಗೆ ಲಭ್ಯ

ವಿರುವ, ನ್ಯೂಯಾರ್ಕ ವಿಶ್ವವಿದ್ಯಾಲಯದ ಡಾಕ್ಟರೇಟ ಪದವೀಧರನ ನೆರವು, ನಿಮ್ಮಕ್ಕನಿಗಿದ್ದರೆ ಯಾರನ್ನಾದರೂ ನೇಮಿಸಿಕೊಳ್ಳುವ ಗೋಜಿಗೆ ಹೋಗುತ್ತಿದ್ದಳೋ ಇಲ್ಲವೋ ! ನನಗೆ ಸಂಪೂರ್ಣ ಸ್ವಾವಲಂಬನದಲ್ಲಿ ವಿಶ್ವಾಸ. ಅಂತೆಯೇ ಸಣ್ಣ ಸಣ್ಣ ಕೆಲಸ ಮಾಡಲು ಯಾವ ಮುಜುಗರವೂ ಇಲ್ಲ. ಅಪರಿಚಿತ ಕೆಲಸದವಳನ್ನು ಮನೆಗೆ ಸೇರಿಸುವದು, ಹೆಗ್ಗಣವನ್ನು ಗೋದಾಮಿಗೆ ಸೇರಿಸಿಕೊಂಡಂತೆ. ಅಂಥವರಿಂದ ಆಗುವ ಸಹಾಯಕ್ಕಿಂತ ಕೀಟಲೆ-ಹಿಂಸೆಗಳೇ ಜಾಸ್ತಿ. ಇವೆಲ್ಲ ನಿನಗೆ ಮಾನ್ಯವಿದ್ದರೆ ನೀನೇ ಹುಡುಕಿ ಕೈಗೊಬ್ಬ, ಕಾಲಿಗೊಬ್ಬ ಕೆಲಸದವಳನ್ನು ನೇಮಿಸಿಕೊಳ್ಳಬಹುದು.' ಎಂಬ ತಮ್ಮ ನಿರ್ಧಾರವನ್ನು ಹೇಳಿಬಿಟ್ಟರು.

ಸೇವಕಿಯ ಆಯ್ಕೆ ನನಗೆ ಬಿಟ್ಟಿದ್ದಾರೆಂಬ ಗೆಲವಿನಿಂದ ಕೆಲಸದವಳ ಹುಡುಕಾಟ ಪ್ರಾರಂಭಿಸಿದೆ. ನಮ್ಮ ಕಟ್ಟಡದಲ್ಲೇ ಇದ್ದ ಸವಿತಾ ಆಗರವಾಲಳ ಕೆಲಸದವಳ ಬಗ್ಗೆ ವಿಚಾರಿಸಿದೆ. "ಬಹನ್‌ಜಿ, ಕನ್ನಡ ಕೆಲಸದವರಿಗೆ ರಾಷ್ಟ್ರ ಭಾಷೆ ಹಿಂದಿ ಬರುವದೇ ಇಲ್ಲವೆಂದು ಮನಗಂಡು, ಈ ಭಾಗ್ಯಳಿಗೆ-ಹರಕು ಮುರುಕು ಹಿಂದಿ ಬರುವದೆಂದು, ನಾನೂರು ರೂಪಾಯಿ ತಿಂಗಳ ವೇತನದ ಮೇಲೆ ನೇಮಿಸಿಕೊಂಡೆ. ಈಗ ಅವಳು ಹೇಳಿದಂತೆ ನಾನು ಕೇಳಿಕೊಂಡಿರ ಬೇಕಾಗಿದೆ ! ಎಂದು ನಿಟ್ಟುಸುರಿಟ್ಟಳು' ಮೀರಾ ಮೆನನ್‌ಳಿಗೆ ವಿಚಾರಿಸಿದೆ." "ನಮ್ಮ ಕೆಲಸದಾಕೆ ಬಿಳಿಕುದುರೆ. ಚಲಚ್ಚಿತ್ರ ನಟಿಯರ ಫ್ಯಾಶನ್‌ದ ಸಲ್ವಾರ್-ಕಮೀಜ್ ತೊಟ್ಟು ಸಾಯಕಲ್ ತುಳಿಯುತ್ತ ಬಂದು ಮಿಂಚಿನ ವೇಗದಿಂದ ಕೆಲಸ ಪೂರೈಸುತ್ತಾಳೆ. ಕೊನೆ ಮೊದಲಿಲ್ಲದ ಅವಳ ಬೇಡಿಕೆಗಳನ್ನು ಪೂರೈಸುವದರಿಂದ ಮುಂದುವರಿದಿದ್ದಾಳೆ. ಎಂದು ಕೈಕೊಡುತ್ತಾಳೋ ! ಎಂಬ ಭಯ ಸದಾ ಕಾಡುತ್ತದೆ." 'ಎಂದು ಅಸಹಾಯಕತೆ ವ್ಯಕ್ತ ಪಡಿಸಿದಳು. ಶಾಂತಾ ಬೈಂದೂರ್, "ನಮ್ಮ ಕೆಲಸದಾಕೆಗೆ ಹಾಯ ಸ್ಕೂಲ್ ಓದಲು ಸಕಲ ಸವಲತ್ತು ಪೂರೈಸಿದ್ದೇವೆ. ಆಕೆಗೆ ಬಿಡುವಾದಾಗ ಒಂದೆರೆಡು ಗಂಟೆ ಬಂದು ಕೆಲಸ ಮಾಡಿದರೆ ಪುಣ್ಯ ! ಎಂದು ಗೊಣಗುತ್ತ ಕಾಫಿ ಮಾಡಿ ಕೊಟ್ಟಿದ್ದಳು. ಮಂಗಳಾ ಕೇಳಕರ್, "ನಮ್ಮಾಕೆ ಕೆಲಸವೇನೋ ಚನ್ನಾಗಿ ಮಾಡುತ್ತಾಳೆ. ಆದರೆ ತೀರಾ ಸಿಡುಕಿ. ಸಾಲದ್ದಕ್ಕೆ ಪುರುಷ ವಶೀಕರಣ ಒಗ್ಗಿಸಿಕೊಂಡವಳು. ನೀವಿರದ ಮನೆಯಲ್ಲಿ ಅವಳನ್ನು ನೇಮಿಸಿಕೊಳ್ಳುವದು

ವ್ಯಾವಹಾರಿಕವಲ್ಲ." ಎಂದು ಬೋಧಿಸಿದಳು ಕೊನೆಗೆ ಇದ್ದುದರಲ್ಲಿಯೇ ಸಾಧುವಾಗಿ ಕಂಡ ಮುದುಕಿಯೋರ್ವಳು ಕೆಲಸ ಮಾಡುತ್ತಿದ್ದ ಮನೆಯ ಅಲಮೇಲಮ್ಮನವರಿಗೆ ವಿಚಾರಿಸಿದಾಗ, ತಮಿಳು ಕನ್ನಡದಲ್ಲಿ, "ಅವಳು ಸತ್ಹೋಗಿ ಒಂದು ತಿಂಗ್ಳಾಯ್ತು, ನಂಗೂ ಸರ್ವೆಂಟ್ ಬೇಕು. ನಿಂಗೆ ಸಿಕ್ರೆ ಏಳಿ!" ಎಂದು ಉದ್ಗರಿಸಿದರು.

ಅಕ್ಕನ ಮನೆಯಲ್ಲಿ ಸೇವಕಿಯರ ಕಪಿಸೇನೆ ಮುಕುರುವದು ಸಾಮಾನ್ಯ ವಾಗಿತ್ತು. ಹೀಗಾಗಿ ಅವಳಿಗೇ ಶರಣು ಹೋದೆ. ಹಿಂದೊಮ್ಮೆ ಬಂದು ಕ್ಷೇಮ ಸಮಾಚಾರ ವಿಚಾರಿಸಿ, ಕಾಫಿ-ತಿಂಡಿ ಗಿಟ್ಟಿಸಿ ಹೋದ ತನ್ನ ಹಿಂದಿನ ಕೆಲಸಗಾತಿ ಕೆಂಪಮ್ಮನ ಹೆಸರು ಸೂಚಿಸಿದಳು. ಯಾವ ಪುಣ್ಯಾತಗಿತ್ತಿ ಇವಳಿಗೆ ಕೆಂಪಮ್ಮನೆಂದು ಹೆಸರು ಇಟ್ಟಳೋ! ಕೆಂಪು ಬಣ್ಣದ ಛಾಯೆ ಶರೀರದಲ್ಲಿ ಎಲ್ಲೂ ಕಾಣದು. 'ಅವಳ ರಕ್ತವೂ ಡಾಂಬರಿನಷ್ಟು ಕಪ್ಪು ಇದ್ದರೆ ಆಶ್ಚರ್ಯವಿಲ್ಲ!" ಎಂದು ರಾಯರು ಗೇಲಿ ಮಾಡಿದ್ದರು. ಕೆಂಪಮ್ಮ ನನ್ನ ಕುಟುಂಬದ ಮಿತಿ ಇರುವ ಸ್ಥಳ, ಮನೆಯವಿಸ್ತಾರ ಕೇಳಿ ಕೂಡಲೇ ಕೆಲಸಕ್ಕೆ ಒಪ್ಪಿಕೊಂಡು ಬಿಟ್ಟಳು. ಹೊಸಮ್ಮ (ನನ್ನಕ್ಕ ಉಷಾ)ನ ತಂಗಿ ದೊಡ್ಡ ಅಧಿಕಾರಿಣಿ, ಎಂದು ಹೇಗೊ ಪತ್ತೆ ಹಚ್ಚಿದಳು. ಮೊದಲ ದಿನ ಮನೆಯನ್ನೆಲ್ಲ ಸ್ವಚ್ಛವಾಗಿ ಗುಡಿಸಿ, ಧೂಳನ್ನೆಲ್ಲ ಝಾಡಿಸಿ, ಲಕಲಕ ಹೊಳೆಯುವಂತೆ ತೊಳೆದಳು. ಇಷ್ಟು ವರ್ಷ ಇವಳನ್ನು ಆಮಂತ್ರಿಸದೇ ಇದ್ದುದಕ್ಕೆ ಮಿಡುಕುವಂತೆ ಆಯಿತು. ಮರುದಿನವೂ ನಿಶ್ಚಿತ ಸಮಯಕ್ಕೆ ಬಂದು, ಪಾತ್ರೆ, ಬಟ್ಟೆ, ಮನೆ ಒರೆಸುವದನ್ನೆಲ್ಲ ಅಚ್ಚುಕಟ್ಟಾಗಿ ಪೂರೈಸಿದಳು. ಇಂಥ ಶ್ರಮಜೀವಿಗಳಿಗೆ ಸಮಾಜ, ಸರಿಯಾಗಿ ನಡೆಸಿಕೊಳ್ಳುತ್ತಿಲ್ಲ, ಎಂದು ಕನಿಕರ ಪಡುವಂತಾಯ್ತು ಒಂದೇವಾರದಲ್ಲಿ ಮನೆಯನ್ನು ರಾಜಭವನದಂತೆ ಕನ್ನಡಿ ಮನೆಯಾಗಿ ಮಾಡುವ ಭರವಸೆಯನ್ನು ಆಕೆ ನೀಡಿದಾಗ ಖುಷಿಯೋ ಖುಷಿ. ಸ್ವಾವಲಂಬನ ತತ್ವ ಬೋಧಿಸುತ್ತ, ಕೆಲಸದಾಕೆಯನ್ನು ನೇಮಿಸದಂತೆ ನೋಡಿಕೊಂಡು, ನನ್ನನ್ನು ಹೆಚ್ಚಿನ ಕೆಲಸಕ್ಕೆ ಹಚ್ಚಿ ತಾವೂ ಗೃಹ ಕೃತ್ಯಗಳಲ್ಲಿ ಕಾರಣವಿಲ್ಲದೇ ಪಾಲುಗೊಳ್ಳುತ್ತಿದುದಕ್ಕಾಗಿ ರಾಯರನ್ನು ಆಪಾದಿಸಿದೆ. ತನ್ನ ವಾದವನ್ನು ಸಮರ್ಥಿಸುವ ಬದಲಾಗಿ ಸುಮ್ಮನೆ ಅರ್ಥಗರ್ಭಿತವಾಗಿ ನಕ್ಕದ್ದರಿಂದ ಪಿಚ್ಚೆನಿಸಿತು.

ಮೂರನೆಯ ದಿನ, ನೆಗಡಿ ಜ್ವರಗಳಿಂದ ಬಳಲುತ್ತಿದ್ದೇನೆ ಎಂದು ಹೇಳಿ ಹೊಗುವದಕ್ಕೇ ಬಂದಿದ್ದಾಕೆಗೆ ಒಳ್ಳೆ ಜವಾಬ್ದಾರಿಯಿದೆ, ಎಂದು ಕೊಂಡೆ. ಕ್ರೋಸಿನ್ ಮಾತ್ರೆಗಳನ್ನು ಕೊಟ್ಟು ಬಿಸಿ ಕಾಫಿ ಮಾಡಿಕೊಟ್ಟೆ. ಅವಳು ಹೊರಟು ಹೋದನಂತರ, 'ಇಂಥವರ ಆರೋಗ್ಯದ ಪೂರ್ವೇತಿಹಾಸ ಅರಿಯದೇ ಸಿಕ್ಕ ಸಿಕ್ಕ ಮಾತ್ರೆಗಳನ್ನು ನುಂಗಿಸುವದು, ಸರಿಯಲ್ಲ. ಆಕೆ ಕಾಯಿಲೆ ಬಂದು ಮಲಗಿಕೊಂಡರೆ ಆದಕ್ಕೆ ನಾವು ಜವಾಬ್ದಾರರಾಗುತ್ತೇವೆ. ಕೆಲ ಪ್ರಸಂಗಗಳಲ್ಲಿ ಕೋರ್ಟು, ಕಚೇರಿ ಅಲೆಯುವ ಪ್ರಸಂಗಗಳು ಬರುವ ದುಂಟು.' ಎಂದು ರಾಯರು ಎಚ್ಚರಿಸಿದರು. ಅಂದಿನ ಕೆಲಸಗಳನ್ನು ಕೆಲಸದಾಕೆ ಕೈಕೊಟ್ಟದ್ದರಿಂದ ಗೊಣಗುತ್ತಲೇ ಮಾಡಿ ಮುಗಿಸಿದೆ. ಆ ಸಂಜೆ ಗೀತಾಂಜಲಿ ಚಲಚ್ಚಿತ್ರ ಮಂದಿರದಿಂದ ಆಕೆ ಹೊರ ಬಿದ್ದಳು, ಎಂದು ಕಂಡವರು ಹೇಳಿದಾಗ ಕೋಪ ನೆತ್ತಿಗೇರಿತ್ತು. ಮರುದಿನ ವಿಚಾರಿಸಿದಾಗ, 'ಇಡೀ ದಿನ ಮಲಗಿ ಬೇಜಾರಾಯ್ತು.ಸಂಜೆ ಪಿಚ್ಚರಿಗೆ ಹೋದ್ರೆ ಏನಾಯ್ತು?' ಎಂದು ನನ್ನನ್ನೇ ಪ್ರಶ್ನಿಸಿದಳು. ಇಷ್ಟು ಸಾಲದ್ದಕ್ಕೆ "ವಿಪರೀತ ಜಾಸ್ತಿ ಕೆಲ್ಸಾ ಮಾಡ್ತೀಯ ? ಅದಕ್ಕೆ ಆ ಪರಿ ಸುಸ್ತು ಎಂದು ಡಾಕ್ಟರರು ಹೇಳಿದ್ದಾರೆ" ಎಂದು ನನ್ನನ್ನೆ ದೂರಿ ಕೊಳ್ಳುವವಳಂತೆ ಆಡಿದಾಗ ಅಬ್ಬ ! ಅನಿಸಿತು. ತನ್ನ ಅಂದಿನ ಬೇಡಿಕೆ ಮುಂದಿಡುತ್ತ. "ಯಜಮಾನರನ್ನ ಚನ್ನಪಟ್ಣದಿಂದ ಇಲ್ಲೇ ಕರ್ಸಿಕೊಳ್ತಾ ಇದೀನಿ, ತರಕಾರಿ ಅಂಗ್ಡಿ ಹಾಕ್ಸಿ ಕೊಡ್ತೀನಿ ಮೂರು ಸಾವಿರ ಖರ್ಚು ಬರುತ್ತೆ. ನಂಗೆರಡು ಸಾವಿರ ಅಡ್ವಾನ್ಸ ಕೊಡಿ, ದುಡಿದು, ಮುಟ್ಟುಸ್ತೀನಿ ಹೊಸಮ್ಮನ ಹತ್ರ ಇನ್ನೊಂದ್ಸಾವಿರ ತಗೋತಿನಿ ಎಂದು ತನ್ನ ಆರ್ಥಿಕ ವ್ಯವಸ್ಥೆಯ ಮುಂಗಡ ಪತ್ರವನ್ನು ಮುಂದಿಟ್ಟಳು. ಇದೆಲ್ಲಿಯ ಗ್ರಾಚಾರ ! ಅನಿಸಿ "ನೋಡಮ್ಮ, ನನ್ನ ಹಣ ಕಾಸಿನ ವ್ಯವಸ್ಥೆಯನ್ನೆಲ್ಲ ರಾಯರೇ ನೋಡ್ತಾರೆ. ನಿನ್ನ ಬೇಡಿಕೆ ಅವರ ಮುಂದೆ ಇಟ್ಟರೆ, ನಿನ್ನನ್ನು ಕೆಲಸದಿಂದ ವಜಾ ಮಾಡಲು ಸೂಚಿಸುತ್ತಾರೆ" ಎಂದು ಅವಳಿಗೆ ಅರ್ಥವಾಗುವಂತೆ ಹೇಳಿದೆ. "ನೀವೆಲ್ಲ ದೊಡ್ಡ ಮನೆಗಳಲ್ಲಿ ಇರಬೇಕು. ನಂಗೆ ಬಾಡಿಗೆ ಮನೆಗೆ ಅಡ್ವಾನ್ಸ ಕೊಡೊಲ್ವ ? ದುಡ್ದು ಮುಟ್ಟಿಸ್ತೀನಿ ಅಂದ್ರೆ ಅಷ್ಟೂ ವಿಶ್ವಾಸ ಇಲ್ವ ?" ಎಂದು ಮುನಿಸಿಕೊಂಡು ಹೊರಟೇಬಿಟ್ಟಳು.

ಸದ್ಯ ತೊಲಗಿದಳಲ್ಲ! ಎಂದುಕೊಂಡಿದ್ದ ಎಣಿಕೆಯನ್ನು ಸುಳ್ಳು ಮಾಡಿದಳು. ಬದಲಾಗಿ ತನ್ನ ನಿಜಸ್ವರೂಪದರ್ಶನ ಮಾಡಿಕೊಟ್ಟಳು. ತನಗೆ ಬ್ರೆಡ್, ಸ್ಯಾಂಡ್‌ವಿಚ್ ಇತ್ಯಾದಿ ಒಗ್ಗುವದಿಲ್ಲ. ಇಡ್ಲಿ-ದೋಸಾ ಮಾತ್ರ ನಡೆಯುತ್ತದೆ ಎಂದಳು. ಹಾರ್ಲಿಕ್ಸ್ ಮಾಡಿ ಕೊಡಿ, ಡಾಕ್ಟರರು ಹೇಳಿದ್ದಾರೆ, ಎಂದಳು. "ನನಗೆ ಎಲ್ಲವೂ ಕ್ಲೀನಾಗಿರಬೇಕು. ನೀರು ವಿಮ್ ಪೌಡರ ಜಾಸ್ತಿ ಜಾಸ್ತಿ ಬೇಕು....ಎಲ್ಲ ಸಾಮಾನು ಎತ್ತಿಡಿ! ಗುಡ್ಸಿ ಹೋಗ್ತಿನಿ ನೆಲ ಒರಿಸಿದ ನಂತರ ಬಿಗಿಯಾಗಿ ಸೀಟುವ ಬದಲಾಗಿ ಎಲ್ಲ ಕೋಣೆಗಳಲ್ಲಿ ಜೋರಾಗಿ ಫ್ಯಾನ್ ಹಾಕಲೇಬೇಕು. ಕೆಲಸಕ್ಕೆ ಬರುವ ಮೊದಲೇ ಸೋಪು ಹಾಕಿ ಬಟ್ಟೆ ನೆನೆಸಿಡಿ. ಚೆನ್ನಾಗಿ ಕ್ಲೀನ್ ಆಗತ್ತೆ. ಹಾಗೇ ಬಟ್ಟೆ ಹಿಂಡಲಿಕ್ಕೆ ಬಿಸಿನೀರು ಕಾಯಿಸ್ಸಿಡಿ ಬಟ್ಟೆ ನೀವೇ ಒಣಹಾಕಬೇಕು" ಅಮೂಲ್ಯ ಸಲಹೆಗಳು ಬರಲಾರಂಭಿಸಿದವು. ಒಮ್ಮೆ ನಿಮ್ಮ ಸೀರೆ ತೊಳ್ದು ರಟ್ಟೆ ನೋವು ಬಂದುಬಿಡ್ತು! ಮನೇಲಿ ಸೀರೆ ಯಾಕೆ ಉಡ್ತೀರಿ? ನಾನು ಕೆಲ್ಸ ಮಾಡೋ ಮನೇಲೆಲ್ಲಾ ನ್ಯಾಟೀನೆ ಹಾಕ್ತಾರೆ! ಆಫೀಸಿಗೆ ಉಡೋ ಸೀರೆಗಳನ್ನೆಲ್ಲಾ ಲಾಂಡ್ರಿಗೆ ಕೊಡ್ತಾರೆ!" ಎಂದು ನನ್ನ ಗ್ರಾಮ್ಯತೆಯನ್ನು ಪರೋಕ್ಷವಾಗಿ ಟೀಕಿಸಿದಳು. ಅವಳ ಈ ಹೊಸ ಸ್ವರೂಪದರ್ಶನದಿಂದ ಅಧೈರ್ಯವೇ ಆಯಿತು. ನೇಮಿಸಿಕೊಂಡ ತಪ್ಪಿಗೆ ಒಂದು ತಿಂಗಳು ಹೇಗಾದರೂ ಸಹಿಸಿಕೊಳ್ಳಬೇಕು. ನಂತರ ನಮಸ್ಕಾರ ಹೇಳಿಬಿಡೋಣ ಎಂದುಕೊಂಡೆ. ರಾಯರೂ ನನ್ನ ನಿರ್ಧಾರವನ್ನು ಸಮರ್ಥಿಸಿದರು.

ಕರ್ನಾಟಕದ ಕರಾವಳಿಯಲ್ಲೆಲ್ಲಾ ವಿಪುಲವಾಗಿ ಬೆಳೆಯುವ ತೆಂಗಿನ ಗರಿಗಳನ್ನು ಕೆತ್ತಿ ತಯಾರಿಸಿದ ಕಸಬರಿಗೆಗಳನ್ನು ಬಳಸುವದೇ ರೂಢಿ. ಹೊನ್ನಾವರದಿಂದ ಹತ್ತು ಹಿಡಿಕುಂಟಿಗಳನ್ನು ರಾಯರು ಹೊತ್ತು ತಂದದ್ದರಿಂದ ಅವನ್ನೇ ಬಳಸುತ್ತಿದ್ದೆ. ಕೆಂಪಮ್ಮನಿಗೆ ಅದು ಸರಿಹೋಗಲಿಲ್ಲ. "ಈ ಪರ್ಕೆ ಏನೂ ಚೆನ್ನಾಗಿಲ್ಲ. ಬೊಂಬಾಯಿ ಪರ್ಕೆಯಿಂದ್ಲೆ ಕ್ಲೀನಾಗಿ ಕಸಾ ಹೋಗೋದು" ಎಂದದ್ದರಿಂದ ಅವಳಿಗೇ ಹಣ ಕೊಟ್ಟು ತರುವಂತೆ ಹೇಳಿದೆ. ಆಕೆ ಹತ್ತು ರೂಪಾಯಿ ಕೊಟ್ಟು ತಂದದ್ದಕ್ಕೆ ಪೇಟೆಯಲ್ಲಿ ಆರು ರೂಪಾಯಿಗಳಷ್ಟೆ! ಎಂದು ರಾಯರು ಹೇಳಿದಾಗ ನಂಬುವದು ಕಷ್ಟ

ದ್ದಾಯಿತು. ಅಂಗಡಿಯವನೇ ಅವಳಿಗೆ ಮೋಸ ಮಾಡಿರಬೇಕು, ಅಥವಾ ಅವಳೇ ನನಗೆ ಸುಳ್ಳು ಹೇಳಿರಬೇಕು. ಯಾವದು ಸರಿ? ಎಂದು ಪತ್ತೆ ಹಚ್ಚಲಾಗದೇ ಚಡಪಡಿಸಿದೆ. ನಿಮ್ಮಲ್ಲೊಂದು ಮರಾನೂ ಇಲ್ವ? ಎಂದು ನಂಜು ತುಂಬಿದ ದನಿಯಲ್ಲಿ ವಿಚಾರಿಸಿದಳು. ಮರಾ ಎಂದರೆ ಕಸ ತುಂಬಲು ಬಳಸುವ ಪ್ಲಾಸ್ಟಿಕ್ ಸಾಧನ ಎಂದರಿತು ಅದನ್ನು ರಾಯರಿಂದ ತರಿಸಿದೆ. ಅದು ಗಟ್ಟಿ ಇಲ್ಲವೆಂದು ಸಿದ್ಧಪಡಿಸಲು ಮೂರನೆಯ ದಿನವೇ ಹಿಡಿಕೆಯನ್ನು ಕಳಚಬೇಕೇ? ಅಗ್ಗದ ಸೋಪ್ ಪೌಡರಿಗೆ ಕೈಯೆಲ್ಲ ಸುಟ್ಟು ಕರಕಾಗುವ ದೆಂದು, ನಯವಾದ ಬಟ್ಟೆಗೆ ಬಳಸುವ ಬೆಲೆಯುಳ್ಳ ಸೋಪು–ಪುಡಿಯನ್ನೇ ತರಿಸಿದಳು. ಮನೆಯಲ್ಲಿ ಟಿ. ವಿ. ಇಲ್ಲದ್ದು ಅವಳ ಘನತೆಗೆ ಕುಂದು ಬಂದಂತೆ ಎಂದು ತೋರಿಸಿಕೊಂಡು, ರಾಮಾಯಣ, ಮಹಾಭಾರತಗಳ ಪ್ರಸಾರದ ಹೊತ್ತಿಗೆ ಅವಳಿಗೆ ರಜಾ ಕೊಡುತ್ತಿದ್ದ ಗೌರವಸ್ಥ ಮಹಿಳೆಯರ ಪ್ರವರ ಹೇಳಿದಳು.

ಗೌರಿಹಬ್ಬದ ದಿನವಾದರೂ ಮನೆಯಲ್ಲಿದ್ದು ಕೆಂಪಮ್ಮನಿಂದ ನೀಟಾಗಿ ಕೆಲಸ ಮಾಡಿಸೋಣವೆಂದು ಆಫೀಸಿಗೆ ರಜಾಹಾಕಿದೆ. ಹಾಲಿನ ಪಾತ್ರೆ ಬರಿದು ಮಾಡಿ ಬಿಸಿನೀರು ಹಾಕಿಟ್ಟೆ. ಪಾತ್ರೆಗಳನ್ನೆಲ್ಲಾ ಖಾಲಿಮಾಡಿ ತಿಕ್ಕಲು ತಯಾರು ಮಾಡಿಟ್ಟೆ. ಖುರ್ಚಿ ಟೇಬಲ್ ಮಡಿಸಿಟ್ಟು ಒರೆಸಲು ಅಣಿಮಾಡಿ ಇಟ್ಟೆ. ಸೋಪು ನೀರಿನಲ್ಲಿ ಬಟ್ಟೆ ನೆನೆಸಿ, ನೆಲಕ್ಕೆ ಫಿನಾಯಿಲ ಸರಿಮಾಡಿದೆ. ಹಿಂಡಲು ಹೇಗಿದ್ದರೂ ಸಹಾಯ ಮಾಡುತ್ತೇನೆಂದು, ಕೆಂಪಮ್ಮ ಬಂದಾಗಿನಿಂದ ತೊಳೆಯದ ಜೋಡಿ ಬೆಡ್‌ಶೀಟ್, ಪಿಲ್ಲೊ ಹೊದಿಕೆ ಗಳನ್ನೆಲ್ಲ ತೋಯಿಸಿದೆ. ದುಡಿದು ಸುಸ್ತಾಗುವವಳಿಗೆಂದು ತುಪ್ಪ ಬಟಾಣಿ ಗೋಡಂಬಿ ಹಾಕಿ ಉಪ್ಪಿಟ್ಟು ತಯಾರಿಸಿದೆ.

ದಿನದ ಹೊತ್ತು ಏರಿದರೂ ಕೆಂಪಮ್ಮ ಕಾಣಿಸಿಕೊಳ್ಳದ್ದರಿಂದ ದುಗುಡು ಆರಂಭವಾಯಿತು. ವಿವಂಚಿತಳಾಗಿ ಒಳಗೆ–ಹೊರಗೆ ಓಡಾಡಿದೆ. ದೂರದಲ್ಲಿ ಕಾಣಿಸುತ್ತಾಳೋ ಎಂದು ಚಾಳೀಸು ಏರಿಸಿ, ಜೋಡಿ ಕಣ್ಣು ನಾಲ್ಕಾಗಿಸಿ ರಸ್ತೆಯನ್ನು ವೀಕ್ಷಿಸಿದೆ. ಹಾಳಾಗಿ ಹೋಗಲಿ, ಬೇಕೆಂದು

ಬೆಳೆಸಿಕೊಂಡ ಕೆಲಸಗಳೇ ಜಾಸ್ತಿ ಇವೆ. ಗೌರಿಹಬ್ಬವನ್ನು ಇನ್ನೊಂದು ದಿನ ಆಚರಿಸುವದೆಂದು ನಿರ್ಧರಿಸಿದೆ. ಸದಾಕಾಲ ವಿವೇಕ ಜಾಗೃತರಾಗಿ ಕುರುಡರಂತೆ ವರ್ತಿಸದಿದ್ದರೆ ರಾಯರಿಗೆ ಖುಷಿ. ಆದ್ದರಿಂದ ಕೆಲಸದಲ್ಲಿ ತೊಡಗಿದೊಡನೆ ಸಹಾಯ ಹಸ್ತ ಚಾಚಿದರು. ಬಟ್ಟೆಗಳನ್ನು ಹಿಂಡಲು ಸಹಾಯ ಮಾಡಿ, ಸ್ವತಃ ಎಲ್ಲವನ್ನು ಒಣಹಾಕಿದರು. ಸಾದಾ ಅಡಿಗೆಯ ಊಟ ಮುಗಿಸಿ, ವಿರಮಿಸಲೆಂದು ಮಲಗಿಕೊಂಡೆ. ಕಣ್ಣು ಹತ್ತಿತ್ತಷ್ಟೆ. ಕರಗಂಟೆ ಕಿರುಚಿಕೊಂಡಿತು. ಆದಾವ ಅತಿಥಿ-ಅಭ್ಯಾಗತರು ಅಕಾಲದಲ್ಲಿ ಬಂದಿದ್ದಾರೆಂದು ಅಳುಕುತ್ತ ಬಾಗಿಲು ತೆಗೆದೆ. ಕರಿಶಿಲೆಯ ವಿಗ್ರಹದಂತೆ ಕೆಂಪಮ್ಮ ಪ್ರತ್ಯಕ್ಷಳಾಗಿದ್ದಳು ! ಮುಂಜಾನೆ ಕೈಕೊಟ್ಟುದ್ದಕ್ಕೆ, ಅವೇಳೆಯಲ್ಲಿ ಬಂದು ನಿದ್ರಾಭಂಗ ಮಾಡಿದ್ದಕ್ಕೆ ಕಪಾಳಕ್ಕೆ ಬಿಗಿಯುವಷ್ಟು ರೇಗಿದ್ದರೂ, ಏನಮ್ಮ ? ಎಂದು ಕೇಳಿದೆ. "ಬೆಳಗ್ಗೆ ಬರಲಿಕ್ಕಾಗಲಿಲ್ಲ. ಮಕ್ಕಳಿಗೆ ಹಬ್ಬದ ಊಟ-ಒಬ್ಬಟ್ಟು ಮಿಕ್ಕಿದ್ರೆ ಒಯ್ಯೋಣಂತ ಬಂದೆ" ಎನ್ನುತ್ತಿದ್ದಂತೆ "ನಮಗೆ ಗೌರಿಹಬ್ಬ ಇಲ್ಲಮ್ಮ" ಎಂದು ರಭಸದಿಂದ ಬಾಗಿಲು ಮುಚ್ಚಿಬಿಟ್ಟೆ.

ಮರುದಿನ ಬಂದೇ ಬಂದಳು. ಮುನ್ನಾದಿನ ಕೆಲಸಕ್ಕೆ ಬಾರದಿರಲು ನೆರೆಮನೆಯ ಮುದುಕಿ ಸ್ವರ್ಗಸ್ಥಳಾದದ್ದೇ ಕಾರಣ. ಮಣ್ಣು ಮಾಡಲು ಹೋಗಬೇಕಾಗಿ ಬಂದಿತು, ಎಂದು ಕುಂಟು ನೆವ ಹೇಳಿದಳು. ಬೆಳಗ್ಗೆ ಮಲ್ಲೇಶ್ವರಂ ಮಾರ್ಕೆಟಿನಲ್ಲಿ ನೋಡಿದ್ದೆನಲ್ಲಾ ! ಎಂದಾಗ ದೇವಸ್ಥಾನಕ್ಕೆ ಹೊರಟಿದ್ದೆ ಎಂದಳು. ಸಂಜೆ ಸಂಪಿಗೆ ಥಿಯೇಟರ್ ಹತ್ರ ಇದ್ದಿಯಂತೆ ! ಎಂದಾಗ ಬೆಪ್ಪಾಗಿ, ಮನಸ್ಸಿಗೆ ಬೇಜಾರಾಗಿತಮ್ಮ ! ಎಂದು ಹಾರಿಕೆ ಉತ್ತರ ಕೊಟ್ಟಳು. ಇಷ್ಟು ನಿಖರವಾಗಿ ತನ್ನ ಓಡಾಟದ ಮೇಲೆ ಕಣ್ಣಿಟ್ಟು ಈಯಮ್ಮನಿಗೆ ರಿಪೋರ್ಟು ಕೊಡುವವರು ಯಾರು ? ಎಂದು ಆಕೆಗೆ ಖಂಡಿತ ಸಂಶಯ ಬಂದಿರಲು ಸಾಕು. ಆದರೂ ತನಗಾದ ಸೋಲಿಗೆ ಹೊಸ ತಿರುವು ಕೊಡಲು ಯತ್ನಿಸಿದಳು. "ನೀವು ಯಾವಾಗಲೂ ಏನಃ ಕೇಳಿದರೂ ಇಲ್ಲ ಎನ್ನುತ್ತೀರಿ. ಅದೇ ಊಸಮ್ಮ ಏನು ಕೇಳಿದರು ಒರಿಗೈಲಿ ಕಳಸೋದೇ ಇಲ್ಲ. ಅಕ್ಕ-ತಂಗಿಯರಲ್ಲಿ ಈ ಅಂತರ ಏಕೆ ? ಎಂದು ಮೂಲಭೂತ ಪ್ರಶ್ನೆಯನ್ನೇ ಕೇಳಿದಳು. "ಅಕ್ಕ ನನ್ನ ತಾಯಿಯಂತೆ. ಅವಳದು ಕೊಡುವ

ಕೈಯಾಗಿರಬೇಕು. ತಂಗಿಯದು ಕೊಳ್ಳುವ ಕೈಯಾಗಿದ್ದರೆ ಚಂದ. ಅವಳ ಮನೆಯಲ್ಲಿ ನಾಲ್ವರು ದುಡಿಯುವ ಗಂಡಸರಿದ್ದಾರೆ. ಅಂತರ ನಿನಗೆ ತಿಳಿಯಬೇಕು" ಎಂದು ಬಾಯಿ ಮುಚ್ಚಿಸಿದೆ. ಇಷ್ಟಾದರೂ ಹಣ-ಕಾಸಿನ ವಿಷಯದಲ್ಲಿ ನಮ್ಮವರದು ಕಪಿಮುಷ್ಟಿ ಏಕೆ ? ಎಂಬ ಹುಡುಕಾಟದಲ್ಲಿ ತೊಡಗಿದಳು. ಒಂದು ದಿನ ಆಫೀಸಿಗೆ ಹೋಗುವಾಗ ಸ್ಟೀಲ್ ಅಲ್ಮೇರಾದ ಬಾಗಿಲು ತೆಗೆದ ಸದ್ದು ಕೇಳಿ ಓಡೋಡಿ ಬಂದಳು. ಕಪಾಟಿನಲ್ಲಿ ಹಣಕಿ ; ಇದರ ತುಂಬಾ ಹತ್ರುಪ್ಪಾಯ್ನೋಟಗಳು ಕಂತೆ ಕಂತೆಯಾಗಿ ಇಟ್ಟಿರಬಹುದು ಅಂದ್ಕೊಂಡಿದ್ದೆ. ಹಳೇ ಬಟ್ಟೆ ಇಡಲಿಕ್ಕೆ ಸ್ಟೀಲು ಕಪಾಟು ಬೇಕಾ ? ಎಂದಳು ನಿರಾಶೆಯ ಧ್ವನಿಯಲ್ಲಿ. ಇನ್ನೊಂದು ದಿನ ರಾಯರು ಇಲೆಕ್ಟ್ರಾನಿಕ್ ಟ್ಯಾಪರ‍್ರೈಟರ ಮೇಲೆ ಏನನ್ನೊ ಮುದ್ರಿಸುತ್ತಾ ಇದ್ದರು. ಕೆಂಪಮ್ಮ ಮೆತ್ತಗೆ, "ಬುಧ್ಯೋರು ಅದೇನು ಕುಟ್ತಾ ಇದ್ದಾರೆ ?" ಎಂದು ಕೇಳಿದರು. "ಬೇಕಾದಾಗ ನೋಟು ಮುದ್ರಿಸಿಕೋತಾ ಇರ್ತೀವಿ !" ಎಂದು ಹಾಸ್ಯ ಮಾಡಿದೆ. "ಬುಧ್ಯೋರಿಗೆ ಹೇಳಿ ನಂಗೊಂದು ಅರವತ್ತಸಾವಿರ ರೂಪಾಯಿ ನೋಟು ಮಾಡ್ಸಿಕೊಡಿ. ನಿಮ್ಮ ಹೆಸರಿನಲ್ಲಿ ಒಂದು ಸ್ಯಾಟ್ ತೊಗೋತಿನಿ" ಎಂದು ಅಂಗಲಾಚಿದಳು. "ಮೊದಲು ಸರಿಯಾದ ಕೆಲಸ ಮಾಡು. ಆನಂತರ ನೋಟು ಮುದ್ರಿಸೋದು ನೋಡೋಣ" ಎಂದ ಹಾರಿಕೆಯ ಮಾತಿನಿಂದ ಅವಳನ್ನು ದಾಟಿಸಬೇಕಾಯಿತು.

ಕೆಂಪಮ್ಮನಿಂದ ಕೆಲಸ ಮಾಡಿಸಲೆಂದೇ ನನ್ನ ಜೀವನ ಮೀಸಲಾಗಿಟ್ಟೆ ಎನ್ನುವ ಭಾಸವಾಗಲಾರಂಭಿಸಿತು. ಅವಳ ಆಗಮನಕ್ಕಾಗಿ ಸಕಲ ಸಿದ್ಧತೆಗಳನ್ನೂ ನಸುಕಿನಲ್ಲಿಯೇ ಮಾಡಿಕೊಳ್ಳಬೇಕಾಗಿದ್ದರಿಂದ ಕಗ್ಗತ್ತಲೆಯ ತಿರುಗಾಟಕ್ಕೆ 'ಕೊಕ್' ಕೊಡಬೇಕಾಯ್ತು. ಇದರಿಂದ ಸ್ವಚ್ಛ ಹವೆ, ವ್ಯಾಯಾಮ, ಪಕ್ಷಿ-ಕೂಜನಗಳು ಕನಸಿನ ಮಾತಾದವು. ಸೇವಕರೆಂದರೇ ಎಲರ್ಜಿ ಬೆಳೆಸಿಕೊಂಡ ರಾಯರು ಬೆಳಗ್ಗೆ ಕೆಂಪಮ್ಮನ ಕರಿಮುಖ ದರ್ಶನವಾದರೆ ಯಾವ ಕೆಲಸವೂ ಸುಸೂತ್ರವಾಗುವುದಿಲ್ಲ, ಎಂಬ ಭಾವನೆ ಬೆಳೆಸಿಕೊಂಡು ಅವಳು ಬರುವ ಅರ್ಧ ಗಂಟೆ ಮೊದಲೇ ತಮ್ಮ ಕಮ್ಮಟ ಸೇರಿಕೊಂಡು ಬಾಗಿಲನ್ನು ಭದ್ರವಾಗಿ ಮುಚ್ಚಿ ಬಿಡುವರು. ನಮ್ಮ ಮನೆಯ

ಒಂದು ಬೆಡ್‌ರೂಮನ್ನು ಕಮ್ಮಟವಾಗಿ ಪರಿವರ್ತಿಸಿಕೊಂಡಿದ್ದಾರೆ. ಅಲ್ಲಿ ನನಗೆ ಸಹ ಪ್ರವೇಶವಿಲ್ಲ. ಕೆಂಪಮ್ಮನ ಪ್ರವೇಶವಂತೂ ಕನಸಿನ ಮಾತಾಗಿತ್ತು. ಆ ಕಮ್ಮಟವೆಂಬ ಗವಿಯಲ್ಲಿ ಏನಿದೆ, ಏನಿಲ್ಲವೆಂದು ಯಾರಾದರೂ ಸಂಶೋಧನೆ ಕೈಕೊಂಡರೆ ಖಂಡಿತವಾಗಿ ಡಾಕ್ಟರೇಟ್ ಜೇಬಿಗೆ ಬಿದ್ದಂತೆ! ಪರಿಣತ ಬಡಿಗನಿಗೆ ಬೇಕಾಗುವ ಕರಗಸ, ಉಳಿ, ಕತ್ತಿಗಳನ್ನು ಕೂಡ ಹಾಕಿದ್ದಾರೆ. 'ಜಾಬ್ ಟಾಯಪಿಂಗ್' ಮಾಡುವವನ ಬಳಿ ಇಲ್ಲದ ಕನ್ನಡ, ಇಂಗ್ಲಿಷ್ ಮತ್ತು ಇಲೆಕ್ಟ್ರಿಕ್ ಟ್ಯಾಪ್‌ರಾಯ್ಟರ್ ಇಟ್ಟಿದ್ದಾರೆ. ಪೊಲೀಸ್ ಕಚೇರಿಯಲ್ಲಿ ಸಿಗದಷ್ಟು ಡಾಯರಿಗಳನ್ನು ತುಂಬಿಸಿದ್ದಾರೆ. ವಿಧಾನ ಸಭೆಯ ಒಂದು ಆಡಳಿತ ವಿಭಾಗದಲ್ಲಿ ಕಾಣ ಸಿಗದಷ್ಟು ಪ್ರಮಾಣದ ಫ್ಯಾಲುಗಳನ್ನು ಶಿಸ್ತಿನಿಂದ ಜೋಡಿಸಿಟ್ಟಿದ್ದಾರೆ. ವೃತ್ತಿ ಛಾಯಾಗ್ರಾಹಕನ ಹತ್ತಿರ ಒಂದೇ ಎನ್‌ಲಾರ್ಜರ್ ಇದ್ದರೆ ಇಲ್ಲಿ ಮೂರನ್ನು! ಕಾಣಬಹುದು. ಅಮೇರಿಕ, ಜರ್ಮನಿಗಳಿಂದ ಕೊಂಡು ತಂದ ಕ್ಯಾಮರಾಗಳ ಜೊತೆಗೆ ಕಬಡಿ ಖಾನೆ (ಗುಜರಿ)ಯಿಂದ ಖರೀದಿಸಿದ ಜಪಾನ, ರಶಿಯ, ಭಾರತದ ಸೃಷ್ಟಿ ಗಳನ್ನೂ ಇಟ್ಟಿದ್ದಾರೆ. ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರು ವಸ್ತು ಸಂಗ್ರಹಾಲಯವೊಂದನ್ನು ಸ್ಥಾಪಿಸಿದ್ದನ್ನು ಓದಿ, ಕೇಳಿ ತಾವೊಂದು ಛಾಯಾಗ್ರಹಣದ ವಸ್ತು ಸಂಗ್ರಹಾಲಯ ಸ್ಥಾಪಿಸುವ ಉದ್ದೇಶದಿಂದ, ಕೆಲಸಕ್ಕೆ ಬಾರದ ಅದೆಷ್ಟೋ ಸಾಮಗ್ರಿ ಒಟ್ಟು ಹಾಕಿದ್ದಾರೆ. ಹತ್ತಾರು ಲೆನ್ಸ್‌ಗಳು, ಹತ್ತಿಪ್ಪತ್ತು ಫ್ಲ್ಯಾಶ್ ದೀಪಗಳು, ಮೂರು-ನಾಲ್ಕು ಸ್ಟ್ಯಾಂಡುಗಳು, ಚಲಚ್ಚಿತ್ರ ಕ್ಯಾಮರಾಗಳು ಹೆಸರು ಅರಿಯದ ಛಾಯಾ ಚಿತ್ರ ತಯಾರಿಕೆಗೆ ಬೇಕಾಗುವ ರಸಾಯನಗಳು, ತೀವ್ರ ವಾಸನೆ ಬೀರುತ್ತಿರು ತ್ತವೆ. ಸಾಲದ್ದಕ್ಕೆ ಪ್ರಾಣಿಶಾಸ್ತ್ರ ಕಲಿಸುವವರಿಗೆ ಉಪಯೋಗ ಬೀಳುವಂಥ ಜಿರಳೆ, ಚೇಳು, ಹಾವುಗಳನ್ನು ಫಾರ್ಮಲಿನ್‌ದಲ್ಲಿ ಉಪ್ಪಿನಕಾಯಿ ತರಹ ಕಾಯ್ದಿರಿಸಿದ್ದಾರೆ. ಕಲಾಕಾರನಿಗೆ ಬೇಕಾಗುವ ಪೆನ್ಸಿಲ್, ರಬ್ಬರ್, ಕುಂಚ ಬಣ್ಣ, ಎಲ್ಲವೂ ಅಲ್ಲಿವೆ. ಅಲ್ಲದೇ ಕಾಯಂ ತೀವ್ರ ಬರಹಗಾರನಿಗೆ ಐದು ವರ್ಷಕ್ಕೆ ಬೇಕಾಗುವಷ್ಟು ಬಿಳಿ ಹಾಳೆ, ಪೆನ್, ಮಸಿಗಳನ್ನು ಶೇಖರಿಸಿದ್ದಾರೆ. ಅಂಚೆಯ ಚೀಟಿ, ಕಾರ್ಡು, ಕವರು, ಅಂತರ್‌ದೇಶೀಯಗಳ ಲೆಕ್ಕ ಸಿಗುವದಿಲ್ಲ.

ಇಂಥ ಕಮ್ಮಟದಲ್ಲಿ ಇತರರಿಗೆ ಉಸಿರು ಕಟ್ಟಿದ್ದರೆ, ರಾಯರು ಒಳಹೊಕ್ಕರೆ ಹೊರ ಬರುವದನ್ನು ಮರೆಯುತ್ತಾರೆ.

ಮುಚ್ಚಿದ ಬಾಗಿಲು ಗುದ್ದಿ, "ರೀ ರೀ ರಾಯರೇ, ಗುಂಡ ಬಾಳಾದ ಕಲ್ಲಿನ ಚಿಪ್ಪಿನ ತೆಂಗಿನಕಾಯಿ ಒಡೆಯಲು ನನ್ನ ಶಕ್ತಿ ಸಾಲದು ! ಸ್ವಲ್ಪ ಒಡೆದು ಕೊಡ್ರಿ !" ಎಂದು ಅಂಗಲಾಚಿದರೂ, "ಅದನ್ನೆಲ್ಲ ಕೆಲಸದವಳಿಗೆ ಹೇಳು !" ಎಂದು ಬಾಗಿಲ ಹಿಂದಿನಿಂದಲೇ ಗುಡುಗುವರು. ರಕ್ತದ ಒತ್ತಡ ಹೆಚ್ಚಿಸುವ ಕೆಂಪಮ್ಮನನ್ನು ಕೆಲಸಕ್ಕೆ ಇಟ್ಟುಕೊಂಡು ಎಂಥ ಮೂರ್ಖತನ ಮಾಡಿದೆನಲ್ಲ, ಎಂದು ಪರಿತಪಿಸಿದೆ. ಆಕೆ ಬರುವ ಮೊದಲು, ರಾಯರು ಕೋಳಿ ಕೂಗುವ ಮುನ್ನ ಎದ್ದು ಕಾಫಿ ಮಾಡಿ ತಿರುಗಾಟಕ್ಕೆ ಹೋಗಲು ಎಬ್ಬಿಸುತ್ತಿದ್ದರು. ಸೂರ್ಯೋದಯವಾಗುವದರೊಳಗೆ ದೋಸೆ ಹುಯ್ದು ನಾಶ್ತಾ ತಯಾರಿಸಲು ಸಹಾಯ ಮಾಡುತ್ತಿದ್ದರು. ಹಾಲು ಕೊಂಡು ಕಾಸಿ ಇಡುತ್ತಿದ್ದರು. ಸ್ನಾನದ ವೇಳೆಯಾಯಿತೆಂದು ಪೇಪರು ಓದುತ್ತಿದ್ದಾಕೆಯನ್ನು ಎಚ್ಚರಿಸುತ್ತಿದ್ದರು. ನಾನು ಒಗೆದ ಬಟ್ಟೆಗಳನ್ನು ಝಾಡಿಸಿ ಶಿಸ್ತಿನಿಂದ ಒಣ ಹಾಕುತ್ತಿದ್ದರು. ಡಬ್ಬಿಗೆ ಟಿಫಿನ್ ತುಂಬಲು ನೆರವಾಗುತ್ತಿದ್ದರು. ನಾನು ಆಫೀಸಿಗೆ ಹೊರಡುವ ತನಕ ವೈಯಕ್ತಿಕ ಲಕ್ಷ್ಯ ಪೂರೈಸುತ್ತಿದ್ದರು. ಸಾಯಂಕಾಲ ಪೇಟೆಯಿಂದ ಏನೇನು ತರಬೇಕೆಂದು ವಿಚಾರಿಸಿ, ನಾನು ಹೇಳಲು ಮರೆತ ಸಾಮಾನುಗಳನ್ನೂ ತಪ್ಪದೇ ತರುತ್ತಿದ್ದರು. ಕೆಂಪಮ್ಮ ಬಂದ ಲಾಗಾಯ್ತು ಈ ಎಲ್ಲ ಸೇವೆಗಳು ನಿಂತೇ ಹೋದವು. ಈ ಬಗ್ಗೆ ಮುಂದಾಲೋಚನೆ, ಈ ಮಂದಮತಿಗೆ ಹೊಳೆಯದೆ ಇದ್ದುದಕ್ಕೆ ಮರುಗುವಂತೆ ಆಯಿತು.

ಕೆಂಪಮ್ಮನ ಕಿರುಕುಳ ಹೆಚ್ಚುತ್ತ ನಡೆಯಿತು. ನಾನಿರದ ಮನೆಯಲ್ಲಿ ಆಕೆ ಒಂದು ನಿಮಿಷವೂ ಇರಕೂಡದು, ಎಂಬ ಸುಗ್ರೀವಾಜ್ಞೆ ಮೊದಲೇ ರಾಯರಿಂದ ಹೊರಟಿತ್ತು. ಹೀಗಾಗಿ ನಾನು ಆಫೀಸಿಗೆ ಹೊರಟು ನಿಂತಾಗ ಅವಳನ್ನು ಕಳಿಸಿಯೇ ಬಿಡಬೇಕಾಗಿತ್ತು. ವಿಳಂಬವಾಗಿ ಬಂದರೂ ಹೋಗುವ ವೇಳೆಯಲ್ಲಿ ವ್ಯತ್ಯಾಸವಾಗಬಾರದೆಂಬ ಭಾರೀ ಅನುಕೂಲವನ್ನು ಆಕೆ ಥಟ್ಟನೆ

ಗುರುತಿಸಿದ್ದಳು. ದಿನೇ ದಿನೇ ತಡವಾಗಿ ಬರಲಾರಂಭಿಸಿದಳು. ಯಾವುದಾದರೂ ಒಂದು ಕೆಲಸಕ್ಕೆ ಆವತ್ತು ಚಕ್ಕರ್ ಎಂದು ಗೊತ್ತು. ಮನೆ 3–4 ದಿನಗಳಿಗೊಮ್ಮೆ ಚೊಕ್ಕಟವಾಗಲಾರಂಭಿಸಿತು. ಕೆಲಸ ಕಡಿಮೆಯಾದಂತೆ ಮಾತಿನಲ್ಲಿ ಹೆಚ್ಚಳ ಮಾಡಿದಳು. ಹಬ್ಬಕ್ಕೆ ಹೊಸ ಬಟ್ಟೆಯ ಬೇಡಿಕೆ ಬಂದಿತು. ಮೇಲಿಂದ ಮೇಲೆ ಬರುತ್ತಿದ್ದವರು, ಮೈದುನನ ಮಕ್ಕಳೇ ? ಎಂದು ವಿಚಾರಿಸುವಳು. ನನಗೇಕೆ ಇಬ್ಬರು ಮಕ್ಕಳಿಲ್ಲ ? ಎಂದು ಕೇಳುವಳು. ಅವಳೊಡನೆ ಹರಟೆಯನ್ನು ರಾಯರು ತೀವ್ರವಾಗಿ ವಿರೋಧಿಸಿದ್ದರು. ಹೀಗಾಗಿ ಪ್ರಶ್ನೆಗೆ ಯಾವ ಉತ್ತರವನ್ನೂ ನಾನು ಕೊಡುತ್ತಿರಲಿಲ್ಲ. ಇದ್ದಕ್ಕಿದ್ದಂತೆ ಒಂದು ದಿನ, "ನಿಮ್ಮ ಮಗ ಅಮೇರಿಕೆಯಲ್ಲಿ ದೊಡ್ಡ ನೌಕರಿಯಲ್ಲಿದ್ದಾರೆ, ಎಂದು ಊಸಮ್ಮ ಹೇಳಿದರು. ಅಲ್ಲಿ ಕೆಲಸದವರೇ ಸಿಗ್ತಾ ಇಲ್ವಂತೆ. ಕೈತುಂಬಾ ಸಂಬಳ ಸಿಗತ್ತಂತೆ. ಇಲ್ಲಿ ಹಂಗೆ ಬಟ್ಟೆ ಕೈಯಿಂದ ತೊಳಿಬೇಕಾಗಿಲ್ವಂತೆ. ಪಾತ್ರೆ–ಬಟ್ಟೆ ಎಲ್ಲಾ ಮಶೀನಿಗೆ ಹಾಕ್ತಾರಂತೆ ! ಅಲ್ಲಿ ಹತ್ತಾರು ಮನೆ ಕೆಲ್ಸ ಮಾಡಿದ್ರೆ, ಬೇಗ ಸಾಲ ತೀರ್ಸಿ, ಇಲ್ಲಿ ಸ್ಯೈಟ್ ಕೊಂಡು ಮನೆ ಕಟ್‌ಬೌದು. ಅಮ್ಮ, ನನ್ನನ್ನು ಅಲ್ಲಿ ಕರೆಸಿಕೊಳ್ಳೀಂತ ಚಿಕ್ಕ ಬುದ್ಧಿಗೆ ಪತ್ರಾ ಬರೀರಿ !" ಎಂದು ದುಂಬಾಲು ಬಿದ್ದಳು. "ನೀವು ಮಗನ್ನ ನೋಡ್ಲಿಕ್ಕೆ ಹೋಗಲ್ವ ? ನನ್ನೂ ಜೊತೆಗೆ ಕರ್‍ಕೊಂಡ್ಹೋಗಿ !" ಮುಂದಿನ ಬೇಡಿಕೆ. ನಾನು ಸುಮ್ಮನೇ ಇದ್ದರೂ ತಾನು ನನ್ನ ಜೊತೆಗೆ ಅಮೇರಿಕೆಗೆ ಹೊರಟದ್ದೇನೆಂದು ಊಸಮ್ಮ, ಆಪ್ತ, ಬಂಧು–ಬಳಗಕ್ಕೆಲ್ಲ ಸಾರಿದ್ದರಿಂದ ಅವರೆಲ್ಲ ಎಚ್ಚರಿಕೆಯ ಮಾತು ನೀಡಲು ಓಡೋಡಿ ಬಂದದ್ದು, ಮೋಜೆನಿಸಿತು.

ಹೊತ್ತ ಹರಕೆ ಪೂರೈಸಲು ಸಕುಟುಂಬವಾಗಿ ತಿರುಪತಿಗೆ ಹೋಗಿ ಬರಲು ಒಂದು ತಿಂಗಳ ಸಂಬಳವನ್ನು ಮುಂಗಡವಾಗಿ ಕೆಂಪಮ್ಮ ಕೇಳಿದಾಗ, "ಒಂದು ತಿಂಗಳು ಕೆಲಸ ಮಾಡಿದ ನಂತರವೇ ಸರಕಾರ ನನಗೆ ಸಂಬಳ ಕೊಡುತ್ತದೆ. ನಿನಗೂ ಅದೇ ಕಾನೂನು ಅನ್ವಯಿಸುತ್ತದೆ" ಎಂದು ಖಂಡ ತುಂಡವಾಗಿ ಹೇಳಿದಾಗ ಪೆಚ್ಚಾದಳು. ಕ್ಷೇತ್ರಕ್ಕೆ ಮೂರು ದಿನಕ್ಕೆಂದು ಹೋದವಳು ಮೂರು ವಾರವಾದರೂ ಪತ್ತೆಯೇ ಇಲ್ಲ. ಮೊದಲ ತೇದಿಗೆ

ಪುನಃ ಹಾಜರಾದಾಗ, ಆಕೆ ಕೆಲಸ ಮಾಡಿದ ದಿನಗಳ ಕೂಲಿ ಎಣಿಸಿ ಕೈಗೆ ಹಾಕಿದಾಗ ಬೊಬ್ಬೆ ಹಾಕಿದಳು. "ನಾನು ಕೆಲಸಕ್ಕೆ ಬಾರದ ದಿನ ಸಂಬಳ ಯಾರೂ ಹಿಡಕೊಳ್ಳೋದಿಲ್ಲ. ಬೇಕಾದ್ರೆ ಊಸಮ್ಮನ್ನ ವಿಚಾರಿಸಿ !" ಎಂದು ಆಣೆ ಮಾಡಿದಳು. "ಹಾಗಿದ್ರೆ ಅಂಥಾವ್ರ ಮನೆಯಲ್ಲೇ ಕೆಲ್ಸ ಮಾಡಮ್ಮ. ಇನ್ನು ನೀನು ಇಲ್ಲಿ ಬರಬೇಕಾಗಿಯೇ ಇಲ್ಲ" ಎಂದು ಕೂಲಿಗಿಂತ ಸ್ವಲ್ಪ ಹೆಚ್ಚು ಹಣ ಕೊಟ್ಟು ಕೆಲಸದವಳ ಕೆಟ್ಟ ಕನಸಿಗೆ ಕೊನೆ ತೋರಿಸಿಯೇ ಬಿಟ್ಟೆ.

ಮರು ನಿಮಿಷದಲ್ಲೇ ರಾಯರು ಕಮ್ಮಟದಿಂದ ಪ್ರತ್ಯಕ್ಷರಾದರು. ಗೆಲುವಿನಿಂದ, "ವೇತನವಿಲ್ಲದೇ, ರಜೆ ಇಲ್ಲದೇ, ನಿನ್ನ ತಲೆ ತಿನ್ನದೇ, ಕಾಸು, ಮುಂಗಡ, ಬಟ್ಟೆ–ಬರೆಗೆ ಪೀಡಿಸದೇ ಕೇಳಿದ ಕೆಲಸಕ್ಕೆ ಸಹಾಯಕನೋರ್ವ ಮನೆಯಲ್ಲೇ ಇದ್ದಾಗ ನಿನಗೆ ಕೆಂಪಮ್ಮ ಬೇಕಾದಳು. ನಾಳೆಯಿಂದ ಕೆಲ್ಸಕ್ಕೆ ಹಾಜರ್ ಆಗ್ಲಾ ಅಮ್ಮಾವ್ರೇ ! ಈಗ್ಲೇ ಹೇಳಿಬಿಡಿ" ಎಂದು ನಾಟಕೀಯವಾಗಿ ಕೇಳಿದಾಗ ಜೋರಾಗಿ ನಗದೇ ಮಾರ್ಗವಿರಲಿಲ್ಲ.

○

# ಚಪ್ಪಲ್ ಖರೀದಿ



ಇಂದು ಸೊಸೆಯನ್ನು ಮಾಡಿಕೊಳ್ಳಲು ಉತ್ತಮಕನ್ಯೆಯೋರ್ವಳನ್ನು ಆರಿಸುವದಕ್ಕಿಂತ, ಒಳ್ಳೆಯ ತಾಳಿಕೆಯ, ಸುಂದರ ಚಪ್ಪಲಿಯನ್ನು ಖರೀದಿಸುವದು ಹೆಚ್ಚಿನ ಕಷ್ಟದ್ದು, ಎಂದು ಯತ್ನಿಸಿದಾಗಲೇ ಅರಿಯಬೇಕು. ಪ್ರಸಿದ್ಧ ಕಂಪನಿಯ ಅಂಗಡಿಗಳಲ್ಲಿ ಕಂಗಾಲಾಗುವಷ್ಟು ಬೆಲೆಗಳು ಗಗನಕ್ಕೆ ಮುಟ್ಟಿವೆ. ರಸ್ತೆಯ ಪಕ್ಕದಲ್ಲೇ ಮಾರಾಟ ಮಾಡುವವು ಏನೋ ಅಗ್ಗವಾಗಿಯೇ ಸಿಗುತ್ತವೆ. ಆದರೆ ಧರಿಸಿ ಮನೆಗೆ ತಲುಪುವದರೊಳಗಾಗಿ ಅವುಗಳ ಆಯುಷ್ಯ ಮುಗಿದೇ ಹೋಗಿರುತ್ತದೆ. ಹತ್ತಾರು ಅಂಗಡಿಗಳಿಗೆ ನುಗ್ಗಿ, ಅಲ್ಲಿಯವರನ್ನು ದುಡಿಸಿ, ದಣಿಸಿ, ಏನು ಕೊಳ್ಳುವದೆಂದು ನಿಶ್ಚಯಿಸಲಾಗದೇ ಬರಿಗೈಯಲ್ಲಿ ಮನೆಗೆ ಮರಳಿ ಬರುವದಕ್ಕಿಂತ, ಪಾದರಕ್ಷೆಗಳ

ಸಂಪೂರ್ಣ ಜವಾಬ್ದಾರಿಯನ್ನು ರಾಯರಿಗೇ ಒಪ್ಪಿಸಿ ನಿಶ್ಚಿಂತಳಾದೆ. ನನ್ನ ಕಾಲಿನ ನಂಬರನ್ನು ರಾಯರು ವಿಚಾರಿಸಿದರು. "ನಮ್ಮ ಊರಾದ ಕುಮಟೆಯಲ್ಲಿ ನಂಬರ್ ಗಿಂಬರಿನ ಜಂಜಾಟವೇ ಇಲ್ಲ! ಒಂದು ರಟ್ಟಿನ ಮೇಲೆ ಕಾಲಿಟ್ಟು ಸುತ್ತಲೂ ಪೆನ್ಸಿಲ್ ಓಡಿಸಿ, ಮೂಡಿ ಬಂದ ಕಾಲಿನ ಗುರುತನ್ನು 'ತಿಯಾ'ನಿಗೆ ತಲುಪಿಸಿದರೆ ಅವನು ಮೂರು ಅಟ್ಟೆಯ, ತನಗೆ ಗೊತ್ತಿದ್ದ ಒಂದೇ ಡಿಝ್ಯೈನಿನ 'ಹೊಣ' (ಕೊಂಕಣಿಯಲ್ಲಿ 'ಚಪ್ಪಲಿ') ಹೊಲಿದು ಮನೆಗೇ ತಂದು ಒಪ್ಪಿಸುತ್ತಿದ್ದ. ಹಿರಿಯರು ಅದರಲ್ಲಿ ರಟ್ಟು, ಚರ್ಮದ ಚೂರುಗಳನ್ನು ಸೇರಿಸಲಾಗಿದೆಯೇ ? ಎಂದು ಸಂಶಯದಿಂದ ಹೊರಳಿಸಿ ನೋಡಿದಾಗ, ಅವನು, 'ಮಕ್ಕಳಾಣೆಯಾಗಿಯೂ ಅಂಥ ಹಲ್‌ಕಟ್‌ಗಿರಿ ಮಾಡುವವನಲ್ಲ' ಎಂದು ವಾದಿಸಿ, ಸೂಚಿಸಿದ ಅರ್ಧ ಬೆಲೆಯನ್ನು ಸಂತೋಷದಿಂದಲೇ ಸ್ವೀಕರಿಸಿ, ಕಳ್ಳು ಕುಡಿಯಲು ಹೋದನೆಂದರೆ ಚಪ್ಪಲಿಯ ಮಾಲಕರು ನಾವೇ ನಾವಾಗುತ್ತಿದ್ದೆವು. ಬೊಕ್ಕೆ ಏಳದಂತೆ ಅದಕ್ಕೆ ತೆಂಗಿನೆಣ್ಣೆಯ ಲಂಚ ಕೊಟ್ಟು ಮುಂಗಾರು ಮಳೆಯಲ್ಲಿ ಧರಿಸದಿದ್ದರೆ. ಆರೇಳು ತಿಂಗಳು ತಾಳಿಕೆ ಬರಲು ಏನೇನೂ ಕೊರತೆಯಿರಲಿಲ್ಲ" ಎಂದು ನನ್ನ 'ಪಾದುಕಾಪುರಾಣ'ದ ಅಧ್ಯಾಯ ಬಿಚ್ಚಿದೆ. ಮದುವೆಯ ಮೊದಲ ದಿನಗಳವು. ಪತ್ನಿಯ ಚಿಕ್ಕ ಪುಟ್ಟ ಬಯಕೆಗಳನ್ನೆಲ್ಲ ಆಸ್ಥೆಯಿಂದಲೇ ಪೂರೈಸುತ್ತಿದ್ದರು, ರಾಯರು.

ತಮ್ಮ ಕಮ್ಮಟದೊಳಗೆ ಹೊಕ್ಕು ಟೇಬಲ್ ಡ್ರಾಯರ್ ಎಳೆದು ರಟ್ಟಿನ ಪೆಟ್ಟಗೆಯನ್ನು ಕೆಳಗೆ ಇಳಿಸಿ, ಅವುಗಳಿಂದ ಮೊಡಕಾಬಾಝೂರದಲ್ಲಿ ಖರೀದಿಸಿದ ಇಂಚಿನ ಪಟ್ಟಿ, ಸಿಂಪಿಗನ ಟೇಪು, ಬಡಿಗನ ಉಕ್ಕಿನ ಟೇಪುಗಳನ್ನು ತಂದರು. ನನ್ನನ್ನು ಎತ್ತರದ ಸ್ಟೂಲಿನ ಮೇಲೆ ಕುಳ್ಳಿರಿಸಿದರು. ಕಾಲುಮಣೆಯನ್ನು ಎಲ್ಲಿಂದಲೋ ಹೊತ್ತು ತಂದು ಅದರ ಮೇಲೆ ಕಾಲನ್ನಿಡುವಂತೆ ಆದೇಶಿಸಿದರು. ಬಹಳ ಹೊತ್ತಿನ ತನಕ ನನ್ನ ಪಾದಾವಲೋಕನ ನಡೆಸಿ "ನಿನ್ನ ಪಾದಗಳು ಮಕ್ಕಳಷ್ಟು ಚಿಕ್ಕವು. ಮುಂಭಾಗ ಪುರುಷರದಷ್ಟು ಅಗಲ ಮತ್ತು ಹಿಂಭಾಗ ಹೆಂಗಳೆಯರದಷ್ಟು ದಪ್ಪವಾಗಿದೆ. ಇದಿಷ್ಟು ಸಾಲದೆಂಬಂತೆ ನೀನು 'ರೂಡ್ಡಿ'ಯಾಗಿರುವದರಿಂದ ಎಡಪಾದ, ಬಲ ಪಾದಕ್ಕಿಂತ ಅರೆಸೆಂಟಿಮೀಟರ್ ದೊಡ್ಡದಾಗಿದೆ ! ಯಾವ ಕಂಪನಿಯ

ಚಪ್ಪಲಿಯೂ ನಿನ್ನ ಕಾಲಿಗೆ ಹೊಂದದು" ತೀರ್ಪಣ್ಣಿತ್ತರು. "ಅಂದರೆ ಬಾಟಾ, ಕರೋನಗಳಂಥ ಕಂಪನಿಯ ಫ್ಯಾಶನೆಬಲ್ ಚಪ್ಪಲ್ ಧರಿಸುವದು ನನ್ನ ಹಣೆಯಲ್ಲಿ ಬರೆದಿಲ್ಲವೇ ?" ಎಂದು ಕೇಳಿದೆ, ಹೆಚ್ಚಿನ ನಿರುತ್ಸಾಹದಿಂದ.

"ಹಾಹಾರ ಬೇಡ, ಇದಕ್ಕೆ ಯೋಗ್ಯ ಪರಿಹಾರವನ್ನು ಕಂಡು ಕೊಳ್ಳೋಣವಂತೆ" ಎಂದು ಸಮಾಧಾನ ಹೇಳಿದರು. ಪಾದದ ನಕ್ಷೆಯನ್ನು ಕೈಯಲ್ಲಿ ಹಿಡಿದು, ಪರಿಚಯದ, ಇಲ್ಲದ ಚರ್ಮಶಿಲ್ಪದ ಅಂಗಡಿಗಳಿಗೆಲ್ಲ ಭೇಟಿ ಕೊಟ್ಟರೂ ನನ್ನ ಕಾಲಳತೆಯ ಚಪ್ಪಲಿ ಸಿಗದೇ ಬಳಲಿ, ಬೆಂಡಾಗಿ ಬಸವಳಿದು ಹಿಂದಿರುಗಿದಾಗ ಮರುಕ ಹುಟ್ಟಿತು. "ಈಗಿರುವ ಚಪ್ಪಲಿ, ಇನ್ನೂ ಕಾಲು ವರ್ಷ ಸೇವೆ ಕೊಟ್ಟೀತು. ಆ ನಂತರ ನೋಡೋಣ, ಇಲ್ಲದಿದ್ದರೆ ತವರಿಗೆ ಹೋದಾಗ ಹೊಲಿಸಿಕೊಂಡು ಬಂದರಾಯಿತು." ಎಂದು ಸೂಚಿಸಿದೆ. "ಎಲ್ಲಾದರೂ ಉಂಟೇ ? ಈ ಮಹಾನಗರದಲ್ಲಿ ನನ್ನಾಕೆಗೆ ಚಪ್ಪಲಿ ಸಿಗದಿದ್ದರೆ ಕಲೆಯ ಮಂದಿರವಾದ ಕನ್ನಡ ನಾಡಿಗೇ ಅವಮಾನ. ದಸರಾ–ದೀಪಾವಳಿ ಹಬ್ಬಗಳು ಮುಗಿಯಲಿ ಆ ನಂತರ ನೋಡೋಣವಂತೆ. ಆಗಲೂ ಸಿಗದಿದ್ದರೆ; ನಾನೇ ಒಂದು ಜೋಡನ್ನು ಹೊಲಿದು ಕೊಡುತ್ತೇನೆ!" ಎಂದು ಪ್ರಧಾನಿ ಕೆಂಪು ಕಿಲ್ಲೆಯ ಮೇಲಿನಿಂದ ಪ್ರಜಾಕೋಟಿಗೆ ಆಶ್ವಾಸನೆ ಕೊಡುವ ಧಾಟಿಯಲ್ಲಿ ನುಡಿದರು.

ಇವರನ್ನು ಬಲ್ಲ ನಾನು ಅದು ಉತ್ತರ ಕುಮಾರನ ಬರಿ ಘೋಷಣೆ ಯೆಂದು ನಂಬುವಂತಿರಲಿಲ್ಲ. ಅಂತೆಯೇ, "ಅದೊಂದು ಮಾಡಬೇಡಿ ! ದಮ್ಮಯ್ಯ" ಎಂದು ಅಂಗಲಾಚಿದೆ.

ಒಂದು ದಿನ ಅನ್ಯಮನಸ್ಕಳಾಗಿ ಕುಳಿತಾಗ, ರಾಯರು ಭಾರಿಭಾರಿ ಚೀಲಗಳನ್ನು ಹೊತ್ತು ಪೇಟೆಯಿಂದ ಬರುವದನ್ನು ನೋಡಿ ಗಾಬರಿ ಯಾಯಿತು. ಶೋಕ ಬೆಲೆಯಲ್ಲಿ ರಾಶಿ ರಾಶಿ ತರಕಾರಿ ತರುವದು ಬೇಡವೆಂದು ಪಟ್ಟು ಹಿಡಿದಾಗ, ಯಾವುದನ್ನೂ ನೂರು ಗ್ರಾಮಕ್ಕಿಂತ ಹೆಚ್ಚಿನ ತೂಕದ ಭಾರವಾದುದನ್ನು ಕೊಂಡು ತರುವದಿಲ್ಲವೆಂದು ನಂಬದ ದೇವರ ಆಣೆ ಮಾಡಿ ಹೇಳಿದ್ದರು! ಹೀಗಿದ್ದಾಗ ಏನನ್ನು ತಂದಿರಬಹುದು ? ಎಂದು ವಿಸ್ಮಯ

ಪಡುತ್ತಿರುವಾಗಲೇ ಹೊರಗಿನಿಂದ ಬಂದು ಕೈಕಾಲು ತೊಳೆದುಕೊಳ್ಳುವ ತಾಳ್ಮೆಯನ್ನೂ ತೋರದೇ ಒಂದೊಂದು ಪೊಟ್ಟಣವನ್ನೂ ಚೀಲಗಳಿಂದ ಹೊರಗೆಳೆಯಲಾರಂಭಿಸಿದರು. ಪೆಟ್ಟಿಗೆಗಳ ಮೇಲೆ ಮುದ್ರಿತ ಹೆಸರುಗಳಿಂದಲೇ ಅವೆಲ್ಲ ಹೆಸರುವಾಸಿ ಕಂಪನಿಗಳ ಚಪ್ಪಲುಗಳೆಂದು ತಿಳಿಯುವಂತಿತ್ತು.

"ಇಂದು ನನ್ನ ಅದೃಷ್ಟ ಚೆನ್ನಾಗಿತ್ತು ಕಣೆ ! ಪ್ರತಿ ದಿನದಂತೆ ನಿನ್ನ ಚಪ್ಪಲಿಗಾಗಿ ಬೇಟೆ ನಡೆಸಿದ್ದೆ. ಫ್ಲೆರ್ಸ್ ಕಂಪನಿಯವರು ಜರ್ಮನ್ ಕಂಪನಿಯೊಂದರ ಸಹಯೋಗದಿಂದ ಹೊಸ ಬಗೆಯ ಪಾದರಕ್ಷೆಗಳನ್ನು ಉತ್ಪಾದಿಸಲಾರಂಭಿಸಿದ್ದರಿಂದ, ಹಳೆಯ ದಾಸ್ತಾನನ್ನು ತೀರ ಅಗ್ಗದ ಬೆಲೆಗೆ ಮಾರಾಟಕ್ಕಿಟ್ಟಿದ್ದರು. ಅವನ್ನು ನೋಡಿ ಹಲುಬಿದ ಹೆಂಗಳೆಯರು ಅದೆಷ್ಟೋ ಮುಂದಿನ ತಿಂಗಳ ಸಂಬಳ ಪಡೆಯುವ ತನಕ ಇವು ಇಲ್ಲಿರುತ್ತವೆಯೇ ? ಎಂದು ಒಬ್ಬಳು ವಿಚಾರಿಸಿದರೆ ಇನ್ನೊಬ್ಬಳು ಕಂತುಗಳಲ್ಲಿ ಹಣಸಂದಾಯ ಮಾಡಿದರೆ ನಡೆದೀತೇ ? ಎಂದು ಪ್ರಶ್ನಿಸಿದಳು. ಸೀರೆ ಕೊಂಡು ಪರ್ಸ್ ಖಾಲಿ ಮಾಡಿಕೊಂಡವಳು, ಚಿಟ್‌ಫಂಡಿಗೆ ಹಣ ಕಟ್ಟಿದವಳು, ಎಲ್ಲರೂ ಬಂದು ಇವನ್ನು ನೋಡಿ ನೋಡಿ ಕೈಹೊಸಕಿಕೊಂಡರು. ನನ್ನ ಕೈಚೀಲದಲ್ಲಿ ಸಹಸ್ರ ರೂಪಾಯಿಗಳಿದ್ದವಲ್ಲ ! ಎಲ್ಲವನ್ನು ಕೊಂಡರೆ, ವಿಶೇಷ ರಿಯಾಯಿತಿ ಇದೆಯೇ ? ಎಂದು ವಿಚಾರಿಸಿದಾಗ, ಬಂದು ನೋಡಿ ನೋಡಿ ಬರಿಗೈಯಿಂದ ಮರಳುತ್ತಿದ್ದ ಗಿರಾಕಿಗಳಿಂದ ಬೇಸತ್ತ ಅಂಗಡಿಕಾರ, 'ಶೇಕಡಾ ಹತ್ತರಷ್ಟು' ಎಂದುಬಿಟ್ಟ, ಅವುಗಳನ್ನು ಒಂದೊಂದಾಗಿ ಕೈ ಚೀಲಕ್ಕೆ ತುಂಬುತ್ತಿದ್ದಾಗ ಅಧಿಕ ಪ್ರಸಂಗಿ ಹೆಣ್ಣೊಂದು, "ನಿಮ್ಮ ಅಂಗಡಿ ಎಲ್ಲಿದೆ ? ನಾಳೆ ಬಂದು ಮೆಚ್ಚಿಗೆಯಾದದ್ದನ್ನು ಖರೀದಿಸುತ್ತೇನೆ." ಎಂದಾಗ, "ಅಮೇರಿಕನ್‌ರಿಗೆ ಇವನ್ನು ಕಳಿಸಲಿದ್ದೇನೆ" ಎಂದು ತೀಕ್ಷ್ಣವಾಗಿ ಉತ್ತರಿಸಿದೆ." ಎಂದರು.

"ಇವನ್ನು ನೋಡು. ಕ್ರೋಮ್ ಚರ್ಮದಿಂದ ನಿರ್ಮಿಸಿದ್ದಾರೆ. ಹಾಕಿಕೊಂಡು ಓಡಾಡಿದರೆ ಹವೆಯಲ್ಲಿ ಹಗುರಾಗಿ ತೇಲಿದ ಅನುಭವವಾಗುತ್ತದೆ. ಈ ತೊಗಲು ಬಲುಬೆಲೆ ಬಾಳುವಂತಹದು ! ಕ್ಯಾಮರಾದ

ಲೆನ್ಸ ಸ್ವಚ್ಛಗೊಳಿಸಲು ಇದನ್ನೇ ಬಳಸುವದರಿಂದ ವಿದೇಶಗಳಲ್ಲಿ ವಿಶೇಷ ಬೇಡಿಕೆ ಇದೆ. ಮೊಸಳೆ ಮೈದೊಗಲಿನ ಚಪ್ಪಲಿಗಳನ್ನು ಎಂದಾದರೂ ನೋಡಿರುವೆಯಾ ? ಅಮೇರಿಕನ್‌ರಿಗೆ ಇವು ಪಂಚಪ್ರಾಣ. ಅಂತೆಯೇ ರಫ್ತುಮಾಡಲೆಂದೇ ತಯಾರಿಸಿದವುಗಳು. ನಾನು ಕೊಂಡ ರಾಶಿಯಲ್ಲಿ ಅವು ಹೇಗೆ ಸೇರ್ಪಡೆಯಾದುವೆಂದು ತಿಳಿಯುತ್ತಿಲ್ಲ. ಒಂಟೆಯ ಚರ್ಮದ್ದು ನೋಡಿದೆಯಾ ? ಅವು ಚಪ್ಪಲಿಯೂ ಅಲ್ಲ, ಬೂಟೂ ಅಲ್ಲ. ಆದರೆ ತನ್ನದೇ ಮೆರುಗು ಪಡೆದಿವೆ. ಬಳಕೆದಾರನಿಗೆ ರಾಣಾಪ್ರತಾಪ್ ಅಥವಾ ರಾಣಿ ಪದ್ಮಿನಿಯ ವಂಶಕ್ಕೆ ಸೇರಿದ ಭ್ರಾಂತಿ ಹುಟ್ಟಿಸುತ್ತವೆ ! ಈ ಚಪ್ಪಲ್ ಶೂ, ಮಹಾರಾಜರೊಬ್ಬರು ಬೇಟೆಯಾಡಿದ ಹುಲಿಚರ್ಮದ್ದು. ಅವರಿಗೆಂದೇ ತಯಾರುಮಾಡಿದ್ದು. ಇದು ಮಹಾರಾಣಿಯ ಮೃದುವಾದ ಪಾದಕಮಲಕ್ಕೆ ಸರಿಹೊಂದುವಂಥಾದ್ದು. ಕೃಷ್ಣಮೃಗದ ಚರ್ಮದ್ದು. ಇವು ಜನ-ಸಾಮಾನ್ಯರು ತೊಡುವ ಕೊಲ್ಲಾಪುರಿ... ....ಎಂದು ವಿವರಿಸುತ್ತಿರುವಾಗ, ನಡುವೆಯೇ ತಡೆದು, "ನೀವು ಕೃಷ್ಣನಾಮ ಪಡೆದರೂ ಶ್ರೀರಾಮನಂತೆ ಏಕಪತ್ನೀ ವ್ರತಸ್ಥರು ! ರಾಮಚಂದ್ರನಿಗಾದರೂ ಜೋಡಿಮಕ್ಕಳಿದ್ದರು. ನಿಮಗೋ ಏಕಮಾತ್ರ ಪುತ್ರ. ಮಗಳಂತೂ ಹುಟ್ಟಲೂ ಹೆದರಿಕೊಂಡಳು. ಇವು ಚಪ್ಪಲಿ-ಶ್ಯೂಗಳಾದರೋ ವಿವಿಧ ಅಳತೆ, ಆಕಾರದವು. ಇವನ್ನೆಲ್ಲ ಧರಿಸುವವರಾದರೂ ಯಾರು? ಎಂದು ಒಮ್ಮೆಯಾದರೂ ಯೋಚಿಸಿದ್ದೀರಾ?" ಎಂದು ಕೆಣಕಲು ಯತ್ನಿಸಿದಾಗ, "ಅದೇನು ಮಹಾ ಸಮಸ್ಯೆ ? ನಮ್ಮ ಕುಟುಂಬದಲ್ಲಿ ಐದು ವರ್ಷದಿಂದ ಮೂವತ್ತು ವರ್ಷದ ಹೆಂಗಳೆಯರು, ಗಂಡುಮಕ್ಕಳು ಇರುವದು ಮರತೇ ಹೋಯಿತೇ ? ಅಲ್ಲದೇ ಹಣಕಾಸಿನಿಂದ ಗಟ್ಟಿ ಇರುವ ತಮ್ಮಂದಿರಿಗೆ ಪರೋಪಚಾರದ ಹೊತ್ತಿಗೆ ಸಹಾಯವಾದೀತು.... ಯಾರಿಗೆ ಯಾವ ಜೋಡು ಹೇಳಿ ಮಾಡಿಸಿದಂತಿದೆಯೋ ಅವನ್ನು ಅವರಿಗೇ ಕೊಟ್ಟುಬಿಟ್ಟರಾಯಿತು. ಅವನ್ನು ಮೆಟ್ಟಿಕೊಂಡು ದೊಡ್ಡಪ್ಪನಿಗೆ ಜಯವಾಗಲಿ ! ಎಂದು ಘೋಷಿಸುತ್ತಾರೆ" ಎಂದು ನನ್ನ ಬಾಯಿ ಮುಚ್ಚಿಸಿದರು.

ಹಿಂದಿನ ರಾತ್ರಿ ಚಪ್ಪಲಿ ರಾಶಿ ಹೊತ್ತು ದಣಿದು ಬಂದದ್ದರಿಂದ ಬೇಗ

ಊಟ ಮಾಡಿ ವಿರಮಿಸುವಂತೆ ಮನ ಒಲಿಸಿದ್ದೆ. ಆಗಾಗ ನಿದ್ರೆಯಲ್ಲಿ ಕನವರಿಸುತ್ತಿದ್ದರು. ಮಾತುಗಳು ಸ್ಫುಟವಾಗದಿದ್ದರೂ ಅವು ಪಾದರಕ್ಷೆಯ ಕುರಿತಾಗಿವೆ, ಎಂದು ಪ್ರಮಾಣ ಮಾಡಿ ಹೇಳಬಹುದಿತ್ತು. ಮರುದಿನ ರವಿವಾರವಾದ್ದರಿಂದ ನಸುಕಿನಲ್ಲೇ ಎದ್ದು, ನಾಶ್ತಾ ಮುಗಿಸಿ ಕೈ ಚೀಲ ಗಳೊಂದಿಗೆ ಮೊಡಕಾಬಾಝಾರಕ್ಕೆ ಧಾವಿಸಿದರು. ಮಟಮಟ ಮಧ್ಯಾಹ್ನ ದಲ್ಲಿ ಚರ್ಮ ಶಿಲ್ಪಕ್ಕೆ ಬೇಕಾಗುವ ಸಕಲ ಸಲಕರಣೆಗಳೊಂದಿಗೆ ಹಿಂದಿರುಗಿ ದಾಗ ಎದೆ ಧಸಕ್ ಎಂದಿತು. ಇದನ್ನು ನಿರೀಕ್ಷಿಸಿದ ರಾಯರು "ಕಂಗಾಲಾಗ ಬೇಡ ಆಗ್ರಾದ ಖ್ಯಾತ ಬಲರಾಮ್ ಮೌಜೀ, ವಿದೇಶಕ್ಕೆ ಮೋಜುಗಳನ್ನು ಕಳಿಸುವದರಲ್ಲಿ ಹೆಸರುವಾಸಿ ! ಆದರೆ ವಿಪರೀತ ಕುಡಿದು ಅಕಾಲ ಮೃತ್ಯುವಿಗೆ ತುತ್ತಾದ. ಅವನ ಮಗನು ಕಾಯ್ದಿಟ್ಟ ಸ್ಥಳದಿಂದ ಉತ್ತರ ಪ್ರದೇಶ ವಿಧಾನ ಸಭೆಗೆ ಆರಿಸಿ ಬಂದನೆಂದು ತಂದೆಯ ವ್ಯಾಪಾರವನ್ನು ಬರ್ಖಾಸ್ತು ಮಾಡಿ ಅಡ್ಡಾದಿಡ್ಡಿ ಬೆಲೆಗೆ ಹದಗೊಳಿಸಿದ ಚರ್ಮವನ್ನು ಮಾರಿ ಬಿಟ್ಟನಂತೆ. ಬೆಂಗಳೂರು ಚಿಲ್ಲರೆ ವ್ಯಾಪಾರಿಗೂ ಕೊಂಚ ಪಾಲು ದಕ್ಕಿತು. ಇಲ್ಲಿಯವರಿಗೆ ಆದರ ಬೆಲೆ ತಿಳಿಯದ್ದರಿಂದ ಸ್ವಲ್ಪ ಭಾಗ ನನಗೂ ಅರ್ಧ ಬೆಲೆಗೆ ಸಿಕ್ಕಿತು ಎಂದು ತಮ್ಮ ಅಂದಿನ ವ್ಯಾಪಾರ ಚತುರತೆಯ ಬಗ್ಗೆ ಎದೆಯುಬ್ಬಿಸಿ ಭಾಷಣ ಬಿಗಿದರು. ರಾಯರು ಹಸಿದು ಬರುತ್ತಾರೆಂದು ಅವರ ಪ್ರೀತಿಯ ಬಾಳೆಕಾಯಿ ಫೋಡಿ ಮತ್ತು ಸೋಲ್ ಕಡಿ ಮಾಡಿದ್ದರೂ, ಗಡಿಬಿಡಿಯ ಸ್ನಾನ, ಊಟದ ಶಾಸ್ತ್ರ ಮುಗಿಸಿ ನನಗೆ ವಿರಮಿಸಲು ಹೇಳಿ, ತನ್ನ ಕಮ್ಮಟ ಸೇರಿ ಕಾರ್ಯೋನ್ಮುಖಿಯಾದರು. ನಿದ್ರಿಸಲು ಯತ್ನಿಸಿ ವಿಫಲಳಾಗಿ, ರಾಯರ ಕಮ್ಮಟದಲ್ಲೇ ಅವರ ಎದುರಿಗೆ ಆಸನಸ್ಥಳಾದೆ.

ನನ್ನ "ಪಾದ ಕಮಲ"ಗಳಿಗೆ ಸರಿಹೊಂದುವ ಚಪ್ಪಲ್ ತಯಾರಿ ನಡೆದಿತ್ತು. ನನ್ನ ಕಾಲಿಗೆ ದೊಡ್ಡವಾಗುವ ಆದರೆ ಉತ್ತಮವಾದ ಚರ್ಮದ ಜೊತೆ ಆರಿಸಿ, ಆದರ ಮೇಲೆ ಬೇಕಾದ ಅಳತೆ ಗುರುತು ಹಾಕಿದ್ದರು. ಚಕ್ರಾಕಾರದ ಚಾಕುವನ್ನು ಬೆಣಚುಗಲ್ಲಿಗೆ ಉಜ್ಜಿ ಹರಿತ ಮಾಡಿಕೊಂಡು, ಅಧಿಕ ಪ್ರಮಾಣದ ಭಾಗವನ್ನು ಕೇಕ್ ಕತ್ತರಿಸುವ ಕೌಶಲದಿಂದ ಲೀಲಾ

ಜಾಲವಾಗಿ ಕತ್ತರಿಸಿದರು. ಮೊಳೆ ಜೋಡಿಸಿದ್ದರಿಂದ ಅವು ಆಗಾಗ ತಲೆಯೆತ್ತದಂತೆ ಪಕ್ಕಡದಿಂದ ತೆಗೆದೊಗೆದು ಟ್ವ್ಯಾನ್ ದಾರಕ್ಕೆ ಹೊಲಿ ಹಾಕಿ ಮೇಣ ಹಚ್ಚಿ ಚರ್ಮದ ಸೂಜಿಯಿಂದ ಕಲಾತ್ಮಕವಾಗಿ ಹೊಲಿದರು. ನಂತರ ಕತ್ತರಿಸಿದ ಭಾಗವನ್ನು ನುಣುಪು ಮಾಡಿ, ಹೊಂದಿಕೊಳ್ಳುವ ಪಾಲಿಶ್ ಬಣ್ಣ ಹಚ್ಚಿದರು. ಮಿನುಗುವಂತೆ ಚಪ್ಪಲಿಗಳನ್ನು ಸಿದ್ಧ ಪಡಿಸಿ, "ಈ ಕೆಲಸಕ್ಕೆ ಎಷ್ಟು ಭಕ್ಷಿಸು ಕೊಡುತ್ತೀರಿ, ಅಮ್ಮಾವ್ರೆ ?" ಎಂದು ಕೇಳಿದಾಗ, ಅಭಿಮಾನ ವಿಸ್ಮಯ–ಸಂತೋಷಗಳಿಂದ ಮೂಕಿಯಾಗಿದ್ದೆ.

"ಅಮೇರಿಕೆಯಲ್ಲಿ ಪಾದರಕ್ಷೆಗಳು ವಿಪರೀತ ದುಬಾರಿ ಎನ್ನುತ್ತಾರೆ. ಹಲವರು ಭಾರತದಿಂದ ಒಯ್ಯುತ್ತಾರೆ. ನೀವು ಆ ದೇಶದಲ್ಲಿ ಇದ್ದ ಗಾಂಧೀಜಿಯವರ ಭಕ್ತರಂತೆ ಬರಿಗಾಲಿನಿಂದ ಓಡಾಡುತ್ತಿದ್ದಿರಾ ? ಕುತೂಹಲ ತಾಳಲಾರದೇ ಒಮ್ಮೆ ಕೇಳಿ ಬಿಟ್ಟೆ. "ನಾನು ಓದುತ್ತಿದ್ದ ಸಿರ್ಯಾಕ್ಯೂಸ್ ವಿಶ್ವವಿದ್ಯಾಲಯ, ಅರ್ಧ ವರ್ಷ ಹಿಮಾಚ್ಛಾದಿತವಾಗಿರುತ್ತಿತ್ತು. ಚರ್ಮದ ಶ್ಯೂ ಅಷ್ಟೇ ಅಲ್ಲದೇ ಎತ್ತರದ ರಬ್ಬರ್ ಬೂಟು ಧರಿಸಬೇಕಾಗುತ್ತಿತ್ತು. ಆದರೆ ಅಲ್ಲಿಯೂ ಪಾದರಕ್ಷೆಗಳ ಸಮಸ್ಯೆಯನ್ನು ಅತ್ಯಂತ ಚಾಣಾಕ್ಷಸವಾಗಿ ಬಗೆಹರಿಸಿಕೊಂಡಿದ್ದೆ!ಪ್ರತಿಯೊಂದು ವಿಭಾಗದ ಸ್ಟೋರ್ಸಿನ ನೆಲಮಾಳಿಗೆಯಲ್ಲಿ ಅಗ್ಗದ ಬೆಲೆಗೆ ಮಾರುವ ಏರ್ಪಾಡು ಇದೆ. ನನ್ನ ಪಾದಗಳು ಚಿಕ್ಕವು; ಹೀಗಾಗಿ ಪುರುಷರ ವಿಭಾಗಕ್ಕೆ ಹೋಗದೇ ಮಕ್ಕಳೊಂದಿಗೆ ಒಂದಾಗಿ ಹೋಗುತ್ತಿದ್ದೆ. ಅಮೇರಿಕನ್ನರಿಗೆಲ್ಲ ಬುದ್ಧಿ ಬರುವ ಮೊದಲು ಪಾದಗಳು ಬೆಳೆದು ಬಿಡುತ್ತವೆ ! ಹತ್ತು–ಹನ್ನೆರಡು ವರ್ಷದ ಮಾಣಿಯ ಪಾದಗಳು ನನ್ನವಕ್ಕಿಂತ ದೊಡ್ಡವಿರುತ್ತವೆ ! ಅಲ್ಲಿಯೂ ನನ್ನ ರೇಟಿಗೆ ಶೂಗಳು ಸಿಗದಿದ್ದರೆ ಮಹಿಳೆಯರ ವಿಭಾಗಕ್ಕೆ ನುಸುಳುತ್ತಿದ್ದೆ. ಯಾಂಕಿ ಹುಡುಗಿಯರು ಬಾಹ್ಯ ಶೋಕಿಗೆ ಮರುಳಾಗುವದು ಜಾಸ್ತಿ. ಹೀಗಾಗಿ ಫ್ಯಾಶನ್ನುಗಳು ಸದಾಕಾಲ ಬದಲಾಗುತ್ತಲೇ ಇರುತ್ತವೆ. ಆದ್ದರಿಂದ ಬೇಡಿಕೆ ಇಲ್ಲದವನ್ನು ಗಿರಾಕಿಗಳು ಕೇಳಿದ ಬೆಲೆಗೆ ಕೊಡುವ ಪದ್ಧತಿಯೂ ಅಲ್ಲಿದೆ. ಶಾಲೆ ಕಾಲೇಜಿಗೆ ಹೋಗುವ ಹುಡುಗಿಯರು ಎತ್ತರ ಹಿಮ್ಮಡದ ಬೂಟು ಧರಿಸುವದಿಲ್ಲವೆಂಬುದು ನಿನಗೆ ತಿಳಿದಿರಬಹುದು. ಅಂತೆಯೇ ಅಂಥವನ್ನು ಆರಿಸಿಕೊಂಡಾಗ, ಮಾತಿನ

ಮಲ್ಲಿಯಾಗಿದ್ದ ಮಾರಾಟಗಾರ್ತಿ, "ನಿನ್ನ ಪ್ರಿಯತಮೆಯನ್ನು ಕರೆದುಕೊಂಡೇ ಬಾ. ಇಳುವರಿ ಬೆಲೆಗೆ ಮಾರಿದ್ದನ್ನು ತಿರುಗಿ ತೆಗೆದುಕೊಳ್ಳುವದಾಗಲೀ ಬದಲಾಯಿಸಿಕೊಳ್ಳುವ ಪದ್ಧತಿಯಾಗಲೀ ನಮ್ಮಲ್ಲಿಲ್ಲ" ಎಂದು ಎಚ್ಚರಿಸುವಳು. ಆದಕ್ಕೆ ನಾನು, "ಹಿಂದಕ್ಕೆ ನಮ್ಮ ದೇಶದಲ್ಲಿ ಹೆಂಗಸರಂತೆ ಗಂಡಸರೂ ಸೀರೆ ಉಡುತ್ತಿದ್ದರು. ಇಂದಿಗೂ ರಾಜಸ್ಥಾನದಲ್ಲಿ ಹೆಂಗಸರ 'ಓಢಣಿ'ಯನ್ನೇ ಗಂಡಸರು, ರುಮಾಲಾಗಿ ಸುತ್ತುತ್ತಾರೆ. ಈ ಮೇಲು ಪಂಕ್ತಿಯನ್ನು ಅನುಸರಿಸಿ. ತಲೆ ನೋಡಿ ಅಲ್ಲ! ಕಾಲನ್ನು ನೋಡಿ ನನ್ನ ಕಾಲಳತೆಯ ಹುಡುಗಿಯನ್ನೆ ಆರಿಸಿಕೊಂಡಿದ್ದೇನೆ!" ಎಂದಾಗ ಅವಳು ಹೊಟ್ಟೆ ಬಿರಿಯುವಷ್ಟು ನಕ್ಕಳು. ತನ್ನ ಜೊತೆಯವರಿಗೆಲ್ಲ ಈ ಜೋಕ್ ಹೇಳಿದಳು. ಅಲ್ಲಿ ಸ್ವಲ್ಪ ಸೊಟ್ಟಾದ 'ಸಾಕ್ಸ' ಕೂಡ ಅಗ್ಗದರದಲ್ಲಿ ಸಿಗುತ್ತಿದ್ದುದರಿಂದ ಭಾರತಕ್ಕಿಂತ ಕಡಿಮೆ ಖರ್ಚಿನಲ್ಲಿ ಅಮೇರಿಕೆಯಲ್ಲಿ ಪಾದರಕ್ಷಣೆ ಮಾಡಿ-ಕೊಂಡಿದ್ದೆ, ಎಂದರೆ ನಂಬುತ್ತೀಯಷ್ಟೆ?" ಒಂದು ಭಾಷಣವನ್ನೇ ಬಿಗಿದರು

ಬೇರೆಲ್ಲೂ ಕಾಣಸಿಗದ, ಕೊಳ್ಳಲಾಗದ ಚಪ್ಪಲಿಗಳನ್ನು ಸ್ನೇಹಿತೆಯರು, ಸಹೋದ್ಯೋಗಿಗಳು ಮನಸಾರೆ ಮೆಚ್ಚಿಕೊಂಡರು. ತಮಗೂ ಅಂಥವನ್ನು ಕೊಡಿಸುವಂತೆ ದುಂಬಾಲು ಬಿದ್ದರು. ಆದರೆ ಅವರಿಗೆಲ್ಲ ಸತ್ಯಸಂಗತಿ ಹೇಳುವದು ಹೇಗೆ? ಒಂದಾನು ವೇಳೆ ಹೇಳಿದರೂ ಅವರು ನಂಬುವರೇ? ಈ ಮುಜುಗರ ತಪ್ಪಿಸಲು ಬೇರೊಂದು ಚಪ್ಪಲಿ ತೊಟ್ಟುಕೊಳ್ಳೋಣವೆಂದರೆ ಕೊಂಡುತಂದವನ್ನೆಲ್ಲ ಆಪ್ತೇಷ್ಟರಿಗೆ ಹಂಚಿ ಬಿಟ್ಟಿದ್ದರು. ಅಂತೆಯೇ ಬೇರೊಂದು ಜೋಡಿಯನ್ನು ಖರೀದಿಸಿ ತರುವಂತೆ ಸೂಚಿಸಿದೆ. ಆ ಸಂಜೆಯೇ ಪಾದರಕ್ಷೆಗಳೊಂದಿಗೆ ಹಿಂದಿರುಗಿದಾಗ ಖುಷಿಯೋ ಖುಷಿ. ಆದರೆ ರಟ್ಟಿನ ಪೆಟ್ಟಿಗೆ ತೆಗೆದು ನೋಡಿದಾಗ, ಭೂಮಿಗೆ ಇಳಿದುಹೋದೆ. ಬಲಕಾಲಿನದು ನಾಶಿಪುಡಿಯ ಬಣ್ಣದ್ದಾದ್ದರೆ ಎಡಕಾಲಿನದು ರಕ್ತವರ್ಣದ್ದು. "ಇದನ್ನು ಧರಿಸಿ ಆಫೀಸಿಗೆ ಹೋಗುವದು ಹೇಗ್ರಿ?" ಎಂದು ಅಸಹನೆಯಿಂದ ವಿಚಾರಿಸಿ ದಾಗ, ಗಾಂಭೀರ್ಯದಿಂದ, "ಅದೇನು ಮಹಾ? ಒಂದು ತಿಂಗಳವರೆಗೆ ಕತ್ತಲಿನ ತಿರುಗಾಟಕ್ಕೆ ಬಳಸು. ಆಗ ಬಣ್ಣ-ಧೂಳು ಜಮಾಯಿಸಿ ಏಕ ರೂಪ ತಾಳುತ್ತವೆ" ಎಂದು ಸಲಹೆ ನೀಡಿದರು. "ನಾಳೆಯಿಂದಲೇ ಆಫೀಸಿಗೆ

ಹೋಗುವಾಗ ಬಳಸುವಂತೆ ಮಾಡೀಂದ್ರೆ" ಎಂದು "ಹುಡುಗಿ ಬುದ್ಧಿ" ತೋರಿಸಿದಾಗ, ತಮ್ಮ ಚರ್ಮಶಿಲ್ಪದ ಹತ್ಯಾರಗಳನ್ನು ಹೊರಗೆಳೆದು, ಚಪ್ಪಲಿಗಳಿಗೆ ಕಪ್ಪು ಬಣ್ಣ ಬಳಿದು ಏಕರೂಪವಾಗಿ ಮಿಂಚುವಂತೆ ಮಾಡಿದರು. ಪೂರ್ತಿ ಕರಿಚಪ್ಪಲಿ ಮನಸ್ಸಿಗೆ ಬರಲಿಲ್ಲ ಎಂದು ನನ್ನ ಮುಖಭಾವದಿಂದ ಅರಿತು, ಶುದ್ಧ ಬಿಳಿಬಣ್ಣದ ಕ್ರ್ಯಾಯಲಿನ್‌ದಿಂದ ಕುಂಚ ಹಿಡಿದು ಚಪ್ಪಲಿಯ ಮೇಲೆಲ್ಲ ನವಿರಾದ ಕುಸುರಿ ಕೆಲಸ ಮಾಡಿದರು ಅಂತೂ ಹೊಸ ಡಿಝ್ಯಾನಿನ ಕರಿಮಿಂಚುವ ಮೈಗೆ ಬಿಳಿಯ ನಾಜೂಕಾದ ಹೂಗಳ ಬಾರ್ಡರ್ ಹೊಂದಿದ ಚಪ್ಪಲಿಗಳು ಧರಿಸಲು ತಯಾರಾದವು. ಸದಾಕಾಲವೂ ಇಂಥ ಒಂದಿಲ್ಲೊಂದು ಕಲಾತ್ಮಕ ಕೆಲಸ ಮಾಡುತ್ತಲೇ ಇರುವ ರಾಯರಿಗೆ ಶ್ರಮದ ಬಗ್ಗೆ ಪರಿವೆಯೇ ಇಲ್ಲ.

ಹೊಸ ಬಗೆಯ ಚಪ್ಪಲಿ ನೋಡಿ, ಕೆಲವರಿಗೆ ಅಸೂಯೆ ದ್ವಿಗುಣವಾಯಿತು.

ದೇಶತ್ಯಾಗ ಮಾಡಿದ ಫಿಲಿಪ್ಪೈನ್ಸ್‌ದ ಪ್ರಥಮ ಮಹಿಳೆ ಮೂರು ಸಹಸ್ರಕ್ಕೂ ಮಿಕ್ಕಿದ ಪಾದರಕ್ಷೆಗಳನ್ನು ಕಲೆ ಹಾಕಿದ್ದ ಸಮಾಚಾರವನ್ನು ವೃತ್ತಪತ್ರಿಕೆಯಲ್ಲಿ ಓದಿ ಕುತೂಹಲ ಕೆರಳಿತು. ಅಲ್ಲಿಯ ಹೊಸ ರಾಷ್ಟ್ರಾಧ್ಯಕ್ಷೆ, ಅವುಗಳನ್ನೆಲ್ಲ ಸಾರ್ವಜನಿಕ ಪ್ರದರ್ಶನಕ್ಕೆ ಬಿಡುಗಡೆ ಮಾಡಲಿದ್ದ ವಾರ್ತೆ ಓದಿ, ಒಮ್ಮೆಯಾದರೂ ಅವುಗಳನ್ನು ಕಣ್ಣುತುಂಬ ನೋಡಿ ಸಂತೋಷಿಸಬಹುದಾಗಿತ್ತು ! ಎಂದು ಹಲುಬಿದೆ. ಇದಾದ ಮರುವಾರ ಈ ಹೊಚ್ಚಹೊಸ ಸಂಗ್ರಹವನ್ನು ವಿಶ್ವದ ಪಾದರಕ್ಷಾ ಪ್ರೇಮಿಗಳಿಗೆ ಹಂಚ-ಲಾಗುವದೆಂದು ಪ್ರಕಟವಾದ ವರದಿಯನ್ನು ರಾಯರೇ ಓದಿ ಹೇಳಿದರು. ತತ್‌ಕ್ಷಣ ಒಂದು ಅರ್ಜಿಯನ್ನು ದೌಡಾಯಿಸಿ ಬಿಟ್ಟೆ. ಕಾಲುಹೆಜ್ಜೆ ಇಟ್ಟಾಗೊಮ್ಮೆ ಝುಕ್,ಪಕ್ ಎಂದು ಹೊತ್ತಿ ಆರುವ ಇಲೆಕ್ಟ್ರಾನಿಕ್ ದೀಪಗಳನ್ನು ಹೊಂದಿಸಿದ ಪಾದರಕ್ಷೆಗಳೂ ಇದ್ದವಂತೆ. ಅಂಥ ಒಂದಾದರೂ ಜೋಡು ದೊರೆಯುವಂತಾದರೆ........ಎಂದು ಕನಸು ಕಂಡಿದ್ದೆ. ಇದಾದ ಕೆಲವೇ ವಾರಗಳಲ್ಲಿ ಫಿಲಿಪ್ಪೈನ್ಸ್ ಸರಕಾರದಿಂದ ನನ್ನ ಹೆಸರಿಗೆ ದಪ್ಪ ಕವರೊಂದು ಬಂದಿತು. ಮಿಶ್ರಭಾವದಿಂದಲೇ ಅದನ್ನು ತೆರೆದೆ. "ನಿಮ್ಮ

ಅರ್ಜಿಯ ಮೇರೆಗೆ ಒಂದು ಪಾದರಕ್ಷೆಯ ಜೋಡಿಯನ್ನು ಮಂಜೂರಮಾಡಲಾಗಿದೆ. ನಮ್ಮ ದೇಶಕ್ಕೆ ಬಂದು ಅದನ್ನು ಆರಿಸಿಕೊಳ್ಳಲು ತಮಗೆ ಅನುಕೂಲತೆ ಮಾಡಿಕೊಡುವದಕ್ಕಾಗಿ ಬೇಕಾಗುವ ಕಾಗದ ಪತ್ರಗಳನ್ನು ಕಳಿಸಿದ್ದೇವೆ. ದಿಲ್ಲಿಯ ನಮ್ಮ ರಾಯಭಾರಿ ಕಚೇರಿಗೆ ಭೇಟಿ ನೀಡಿದರೆ ಅವರು ತಮಗೆ ಸಕಲ ನೆರವನ್ನು ನೀಡುವರು. ನಮ್ಮ ದೇಶಕ್ಕೆ ನಿಮಗೆ ಸುಸ್ವಾಗತ !" ಓದಿ ನನ್ನ ಆನಂದಕ್ಕೆ ಪಾರವೇ ಇರಲಿಲ್ಲ.

ಸಂಜೆ ರಾಯರು ಬಂದೊಡನೆ ಹಿಗ್ಗುತ್ತ ಪತ್ರವನ್ನು ತೋರಿಸಿ ನನ್ನ ವಿದೇಶ ಪ್ರಯಾಣದ ತಯಾರಿಗೆ ನೆರವು ಕೋರಿದೆ. ರಾಯರು ಯಾವ ಪ್ರತಿಕ್ರಿಯೆಯನ್ನು ತೋರಿಸಲಿಲ್ಲ. ಏಕೆಂದು ವಿಚಾರಿಸಿದಾಗ, "ನಾಲ್ಕು ನೂರು ರೂಪಾಯಿಗಳ ಶ್ಯೂಸ್ ನಿನಗೆ ಪುಕ್ಕಟೆ ಸಿಗುತ್ತಿರಬಹುದು. ಆದರೆ ಅಲ್ಲಿ ಹೋಗಿಬರಲು ನಾಲವತ್ತು ಸಾವಿರ ರೂಪಾಯಿ ಖರ್ಚುಮಾಡಲು ಸಿದ್ಧಳಿರುವಿಯಾ ?" ಎಂದು ಕೇಳಿದಾಗ ನನ್ನ ಬೆಪ್ಪುತನದ ಅರಿವಾಯ್ತು. ಅದೇ ಹಣದಲ್ಲಿ ಜೀವನದುದ್ದಕ್ಕೂ ಬೇಕಾದ ಫ್ಯಾಶನ್ನಿನ ಬೇಕಷ್ಟು ಪಾದತ್ರಾಣಗಳನ್ನು ಕೊಳ್ಳಬಹುದು !

ರಾಯರು 'ಕುಶಲಕರ್ಮಿ' ಎಂಬ ಅಭಿಮಾನದಿಂದ ಅವರ ಚರ್ಮಶಿಲ್ಪಿ ಪರಿಣತಿಯ ಬಗ್ಗೆ ಅಪ್ತೇಷ್ಟರ ಎದುರಿಗೆ ಜಂಬ ಕೊಚ್ಚಿದ್ದೇ ತಪ್ಪಾಯ್ತು. ಕೆಲವೇ ದಿನಗಳಲ್ಲಿ ರಾಯರಿಗೆ 'ಹೊಣಾಕಾಮತ್' (ಚಪ್ಲಿ ಕಾಮತ್), ಎಂಬ ಬಿರುದು ದಕ್ಕಿತು. ಈ ಕುಚೋದ್ಯವನ್ನೇ ಮುಂದರಿಸಿದ ಊರಿನ ಕಿಡಿಗೇಡಿಯೊಬ್ಬ, ಇವರಿಗೆ ಪತ್ರ ಬರೆದ. "ಹೊಣಾಕಾಮತರಿಗೆ ವಂದನೆಗಳು. ಇಂದಿನ ದಿನಗಳಲ್ಲಿ ನಮ್ಮ ಊರಿನಲ್ಲಿ ಬೂಟ ಚಪ್ಪಲ್ ರಿಪೇರಿ ಮಾಡುವವರು ಯಾರೂ ಉಳಿದಿಲ್ಲ ! ಹೀಗಾಗಿ ಊರವರ ದುರಸ್ತಿಯಾಗಬೇಕಿದ್ದ ಚಪ್ಪಲಿಗಳೆಲ್ಲ ರಾಶಿರಾಶಿಯಾಗಿ ಬಿದ್ದಿವೆ. ಆದ್ದರಿಂದ ನೀವುಗಳು ನಮ್ಮಲ್ಲಿಗೆ ಬಂದು ತಮ್ಮ ಕರಕುಶಲತೆಯ ಲಾಭವನ್ನು ಊರವರಿಗೆ ಕೊಡಮಾಡಬೇಕಾಗಿ ವಿನಂತಿ" ಪತ್ರದ ಧಾಟಿ ಹೀಗಿತ್ತು.

ರಾಯರು ಆ ಕೂಡಲೇ ಮಾರ್ಮಿಕವಾಗಿ ಉತ್ತರ ಬರೆದರು. "ನಮ್ಮ

ಏಕಮೇವ ಪುತ್ರನು ಕಂಪ್ಯೂಟರಂಗ್ ಸ್ನಾತಕೋತ್ತರ ಪದವಿಯನ್ನು ಅಮೇರಿಕನ್ ವಿಶ್ವವಿದ್ಯಾಲಯದಿಂದ ಪಡೆದಿದ್ದರಿಂದ ಅಲ್ಲಿಯ ಖ್ಯಾತ 'ಪ್ರೊಸೊಫ್ಟ್' ಕಂಪನಿಗೆ ಬರಮಾಡಿಕೊಂಡು ಉಚ್ಚ ಅಧಿಕಾರಿಯಾಗಿ ನೇಮಿಸಿಕೊಂಡಿದ್ದಾರೆ. ನಾವಿಬ್ಬರೂ ಸುಖಮಯ ನಿವೃತ್ತಜೀವನ ನಡೆಸುತ್ತಿದ್ದೇವೆ. ಸದ್ಯದಲ್ಲಿ ಕಾರೊಂದನ್ನು ಕೊಳ್ಳುವ ವಿಚಾರವನ್ನು ಇಟ್ಟುಕೊಂಡಿದ್ದೇವೆ. ಹೀಗಾಗಿ ನಮ್ಮ ಪಾದರಕ್ಷೆಗಳೇ ಸವೆದುಹೋಗುವ ಪ್ರಮೇಯ ಇಲ್ಲವಾಗಿದೆ! ಚರ್ಮಶಿಲ್ಪದ ಸಾಧನಗಳನ್ನೇನು ಮಾಡುವದು ಎಂದು ಯೋಚಿಸುತ್ತಿದ್ದಾಗಲೇ ನಿಮ್ಮ ಪತ್ರ ಬಂದದ್ದು ಒಳ್ಳೆಯದಾಯಿತು. ನಿಮ್ಮಲ್ಲಿ ಹೇಗಿದ್ದರೂ ಮನೆತುಂಬ ಮಕ್ಕಳು, ರ್‍ಯಾಕ್ ತುಂಬ ಚಪ್ಪಲು! ಆದ್ದರಿಂದ ಈ ಸಂಗ್ರಹ ನಿಮ್ಮ ನೆರವಿಗೆ ಬರಬಹುದೆಂದು ಕೂಡಲೇ ಒಂದು ವಿಚಾರ ಹೊಳೆಯಿತು. ಇಂದಿನಿಂದ ನನ್ನ ಸಾಧನಗಳೆಲ್ಲ ನಿಮ್ಮ ಸೊತ್ತು. ನಿಮ್ಮ ವಿಪುಲ ಸಂತಾನದ ಒಬ್ಬಿಬ್ಬರು ಸದಸ್ಯರಿಗೆ ಅವುಗಳ ತರಬೇತಿ ಕೊಟ್ಟಲ್ಲಿ ಸುಲಭವಾಗಿ ನಿಮ್ಮೂರಲ್ಲೇ ಒಂದು ಅಂಗಡಿಯನ್ನು ತೆರೆಯಬಹುದು!"

ಈ ಪತ್ರಕ್ಕೆ ಉತ್ತರ ಬರಲೇ ಇಲ್ಲ.



# ವೇಳೆ ತಿಳಿಯದವರ ಮೇಳ




ಟ್ರಿನ್‌ನ್‌ನ್, ಎಂದು ಟೆಲಿಫೋನು ಕಿರುಚಿಕೊಂಡಿತು. ಆವೇಳೆಯಲ್ಲಿಯೇ ಇವರಿಗೆಲ್ಲ ನೆನಪಾಗುವದು ! ಎಂದು ಶಾಪ ಹಾಕುತ್ತ ಎದ್ದು ಬಂದು, ಸಂಭಾಷಣೆಯಲ್ಲಿ ಉತ್ಸುಕತೆಯಿಲ್ಲದವಳಂತೆ "ಹಲ್ಲೋ" ಎಂದಾಗ "ನಮಸ್ಕಾರ ಮ್ಯಾಡಂ, ನಮಗೆ ಜೀವಂತ ಗಡಿಯಾರ ಬೇಕಿತ್ತಲ್ಲ" ವಿನಯದ ಧ್ವನಿ. "ಇದೇನು ಮರ್ಗಿ, ಮಟನ್ ಮಾಡುವ ಅಂಗಡಿ ಎಂದುಕೊಂಡಿರಾ!" ಎಂದು ಧ್ವನಿಯನ್ನು ಏರಿಸಿದಾಗ, "ಕೋಪಾ ಮಾಡ್ಕೊಬೇಡ್ರಿ ! ಅಮ್ಮಾವ್ರೆ, ಸದಾಕಾಲವೂ, ಸರಿಯಾದ ವೇಳೆ ಹೇಳುವ ಜೀವಂತ ಹುಂಜ ಸಾಕಿದೀರಿ ಎಂದು ನೀವೇ ಘಂಟಾಘೋಷವಾಗಿ ಸಾರಿರಲಿಲ್ಲವೇನ್ರೀ ?" ಎಂದು ನಗುತ್ತ ಅಪರಿಚಿತ ಧ್ವನಿ ಪ್ರಶ್ನಿಸಿದಾಗ, ಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದ ನನ್ನ 'ಜೀವಂತ ಗಡಿಯಾರ'ಲೇಖನವನ್ನೂ ಇವರು ಓದಿರಬೇಕೆಂದು ಅರಿವಾಗಿ ನಾನೂ ಜೋರಾಗಿ ನಕ್ಕೆ. "ಆದರೆ ಆ ಗಡಿಯಾರವನ್ನು ನಿಮಗೆ ಮಾರುವಂತೆಯೂ

ಇಲ್ಲ, ಕೈಗಡವಾಗಿ ಕೊಡುವಂತೆಯೂ ಇಲ್ಲ. ಕ್ಷಮಿಸಿ"... ಎಂದು ಫೋನು ಕೆಳಗಿಡುವವರಲ್ಲಿ ಇದ್ದೆ. ಅಪರಿಚಿತ ಧ್ವನಿ ಮತ್ತೆ, "ತಾವು ಆಕಾಶವಾಣಿ ನಿರ್ದೇಶಕಿ ಎನ್ನುವದು ಗೊತ್ತು, ಅದಕ್ಕೂ ಹೆಚ್ಚಾಗಿ ತಮ್ಮ ಯಜಮಾನರು ವಿಜ್ಞಾನಿಗಳು, ಖ್ಯಾತ ಛಾಯಾಚಿತ್ರಗಾರರು, ತುಂಬ ಒಳ್ಳೆಯ ಬರಹ ಗಾರರು ಎಂದು ಚೆನ್ನಾಗಿಯೇ ಗೊತ್ತು! ಅಂತೆಯೇ ಈ ಅವೇಳೆಯಲ್ಲಿ ತಮಗೆ ತೊಂದರೆ ಕೊಡುವ ಸ್ವಾತಂತ್ರ್ಯ ತೆಗೆದುಕೊಂಡೆ. ನಾಳೆ ನಮ್ಮ ಪ್ರತಿನಿಧಿಗಳು ಬಂದು ತಮ್ಮನ್ನು ಕಾಣುತ್ತಾರೆ. ಈ ಫೋನಿನ ಉದ್ದೇಶ ಹೇಳುತ್ತಾರೆ. ತೊಂದರೆಗೆ ಕ್ಷಮಿಸಿ" ಎಂದು ವಂದನೆ ಹೇಳಿದರು.

ಮರುದಿನ ಬಂದ ಪ್ರತಿನಿಧಿಗಳು, "ನಾವೆಲ್ಲ ಕೆಲವು ಬುದ್ಧಿಜೀವಿಗಳು ಸೇರಿ 'ವೇಳೆ ತಿಳಿಯದವರ ಸಂಘ' ಒಂದನ್ನು ಕಟ್ಟಿಕೊಂಡಿದ್ದೇವೆ. ಅದರ ಪ್ರಥಮ ಸಮ್ಮೇಳನವನ್ನು ಬೆಂಗಳೂರಿನಲ್ಲಿ ಕರೆಯಬೇಕೆಂದಿದ್ದೇವೆ. ಆದರ್ಶ ವಾದ ಬೌದ್ಧಿಕ ಜೀವನ ನಡೆಸುತ್ತ ವೇಳೆಯನ್ನೂ, ವೇಳೆಯನ್ನು ತಿಳಿಸುವ ಸಾಧನವಾದ ಗಡಿಯಾರವನ್ನೂ ಧಿಕ್ಕರಿಸಿದ ನಿಮ್ಮ ಯಜಮಾನರಿಗಿಂತ ಯೋಗ್ಯವಾದ ಯಾವ ವ್ಯಕ್ತಿಯೂ ಅಧ್ಯಕ್ಷನಾಗಲು ನಮಗೆ ಗೋಚರಿಸುತ್ತಿಲ್ಲ. ಆದ್ದರಿಂದ ಲೋಕಕಲ್ಯಾಣದ ಈ ಕೆಲಸಕ್ಕೆ ದಯವಿಟ್ಟು ಅವರನ್ನು ಒಪ್ಪಿಸಿ" ಎಂದು ಅಂಗಲಾಚಿದರು.

ಈವರೆಗೂ ಯಾರ ಗಮನಕ್ಕೂ ಬಾರದಿದ್ದ ರಾಯರ ಪ್ರತಿಭೆಯ ಇನ್ನೊಂದು ಮುಖವನ್ನು ಈ ಬುದ್ಧ ಜೀವಿಗಳ ಸಂಘ ಗುರುತಿಸಿದ್ದನ್ನು ಕಂಡು ಆತ್ಯಾನಂದವಾಯಿತು. ಅವೇಳೆಯಲ್ಲಿ ಎಲ್ಲರಿಗೂ ಫೋನು ಮಾಡಿ, ಎಚ್ಚರಿಸಿ ಮನುಷ್ಯನ ಕಾಲಾತೀತ ಪ್ರಜ್ಞೆಯನ್ನು ಜಾಗೃತ ಗೊಳಿಸುವದೇ ವೇಳೆ ತಿಳಿಯದವರ ಸಂಘದ ಸಂಕೇತವೆಂದು ಅರಿತು ಕೊಂಡೆ. ಈ ಬೃಹತ್ ಸಮ್ಮೇಳನದ ಅಧ್ಯಕ್ಷರಾಗಲು ರಾಯರ ಮನಸ್ಸನ್ನು ಒಲಿಸುವದಾಗಿ ಮುಂಗಡವಾಗಿಯೇ ಮಾತು ಕೊಟ್ಟೆ. ಅವರು ಯಾವುದೇ ಸಭೆ–ಸಮಾರಂಭ ಗಳಲ್ಲಿ ಪಾಲ್ಗೊಳ್ಳುವವರಲ್ಲವಾದರಿಂದ ಇದೊಂದು ಸಾಹಸವೇ ಆಗಿತ್ತು. ದುಂಬಾಲು ಬಿದ್ದು, ಮೇಳದ ಸಂಕೇತವನ್ನೇ ಪುನಃ ಪುನಃ ಪ್ರಯೋಗಿಸಿ ಅವರನ್ನು ಒಪ್ಪಿಸಿದ್ದಾಯ್ತು.

ಈ ನನ್ನ ಪ್ರಯತ್ನವನ್ನು ಗುರುತಿಸಿ ಸಂಚಾಲಕರು, ವೇದಿಕೆಯ ಮೇಲೆ ನನ್ನನ್ನು ಪ್ರತಿಷ್ಠಾಪಿಸಿ ಮಾಲಾರ್ಪಣೆ ಮಾಡಿದರು. ಕಾರ್ಯದರ್ಶಿ ಚಂದ್ರಪ್ಪ, "ಇವರು (ಹೆಸರನ್ನು ತಪ್ಪಾಗಿ ಹೇಳಿದರು) ಅಮೇರಿಕೆಯಲ್ಲಿ "ಇಪ್ಪತ್ತನೇ ಇಯತ್ತಾ" (ಡಾಕ್ಟರೇಟಿಗೆ ಹೊಸ ಕನ್ನಡ ಪ್ರಯೋಗ) ಕಲಿತರೂ ನಿಗರ್ವಿ ಮನುಷ್ಯ! ಒಳ್ಳೇ ಫೋಟೊ ತೆಗೀತಾರೆ. ನಮ್ಮ ಕುಟುಂಬದವರೆಲ್ಲರ ಫೋಟೊ ತೆಗೆದಿದ್ದಾರೆ. ಪತ್ರ ಬರೆಯುವಷ್ಟು ಸಲೀಸಾಗಿ ಲೇಖ, ಪುಸ್ತಕ ಬರೀತಾರಂತೆ. ಎಷ್ಟೋ ಬಹುಮಾನ ಬಂದಿದೆಯಂತೆ. ಯಾವಾಗಲೂ ಗಡಿಯಾರ ಬಳಸದೇ ಇರುವದು ಅವರ ವೈಶಿಷ್ಟ್ಯವಂತೆ. ಅವರ 'ಸಸ್ಯಗಡಿಯಾರ' ಲೇಖನವೇ ನಮ್ಮ ಸಂಘವನ್ನು ಸ್ಥಾಪಿಸಲು ಸ್ಫೂರ್ತಿಯ ಸೆಲೆಯಾಯ್ತು....ಈ ಅಮ್ಮನವರಂತೂ ಸಾಕ್ಷಾತ್ ಸೀತಾದೇವಿ! ವೇಳೆಯ ಕುರಿತಾದ ಯಜಮಾನರ ಶಿಸ್ತನ್ನು ತಪ್ಪದೇ ಪಾಲಿಸುತ್ತಾರೆ. ಅಮೇರಿಕೆಯಿಂದ ಅವರ ಚಿರಂಜೀವ, ಅವರಿಗೊಂದು ಕೈಗಡಿಯಾರ ಕಳಿಸಿಕೊಟ್ಟರೂ, ದೇಶಾಭಿಮಾನದಿಂದ ಅದಕ್ಕೆ ಸಕಾಲದಲ್ಲಿ ಕೀಲಿ ಕೊಡುತ್ತಿಲ್ಲ (ಮರವಿನಿಂದ !) ಆಫೀಸಿಗೆ ಹೋಗುವಾಗ ಧರಿಸುವದಿಲ್ಲ (ವೇಳೆಯ ಅಭಾವದಿಂದ !!) ಅಲ್ಲದೇ ಸರಿಯಾದ ವೇಳೆಯನ್ನು ಅದು ತೋರಿಸುವದೇ ಇಲ್ಲವೆಂದು ಕಂಡುಕೊಂಡಿದ್ದಾರೆ (ಅದನ್ನು ಹೊಂದಿಸುವ ತಾಂತ್ರಿಕಜ್ಞಾನ ಇಲ್ಲದ್ದರಿಂದ!!) ಅಲ್ಲದೇ ಅಮಾವ್ರು 'ಜೀವಂತ ಗಡಿಯಾರ' ಎಂಬ ಲೇಖ ಬರೆದು ನಿರ್ಜೀವ ಯಂತ್ರವೊಂದೇ ಆಗಿರುವ ಗಡಿಯಾರದಲ್ಲಿ ವಿಶ್ವಾಸವಿಲ್ಲ, ಮನುಷ್ಯರಾಗಿ ಬಾಳುವದರಲ್ಲಿ ಮಾತ್ರ ವಿಶ್ವಾಸವಿದೆ, ಎಂದು ತೋರಿಸಿ ಕೊಟ್ಟದ್ದರಿಂದ ನಮ್ಮ ಸಂಘದ ಸದಸ್ಯರಿಗೆಲ್ಲ ಮಾರ್ಗದರ್ಶನ ಮಾಡಿದಂತಿದೆ. ಹೀಗಾಗಿ ಅಧ್ಯಕ್ಷರಾಗಲು ಇವರ ಯಜಮಾನರಿಗಿಂತ ಯೋಗ್ಯತಾವಂತರು ಯಾರಿದ್ದಾರೆ? ಇನತ್ತು ಮಾನ್ಯ ಮುಖ್ಯಮಂತ್ರಿಗಳು ಮುಖ್ಯ ಅತಿಥಿಗಳಾಗಿ ಬರಲಿದ್ದಾರೆ. ಆದರೆ ಸದ್ಯ ಅವರು ತಮ್ಮ ಸಹೋದ್ಯೋಗಿಗಳ ಜೊತೆಗೆ ಗುಪ್ತಾಲೋಚನೆಗೆ ತೊಡಗಿದ್ದರಿಂದ ಆಗಮಿಸಲು ಒಂದೆರಡು ತಾಸು ಹೆಚ್ಚುಕಡಿಮೆ ಆದೀತು, ಎಂದು ತಿಳಿಸಿದ್ದಾರೆ. ಆದ್ದರಿಂದ ತಾವೆಲ್ಲ ಅಲ್ಲಿಯ ತನಕ ಶಾಂತ ರೀತಿಯಿಂದ ಇದೀಗ ಪ್ರಾರಂಭವಾಗಲಿರುವ

ಮನರಂಜನೆಯ ಕಾರ್ಯಕ್ರಮಗಳನ್ನು ನೋಡಿ ನಲಿಯಬೇಕಾಗಿ ವಿನಂತಿ' ಎಂದು ಭಾಷಣ ಮುಗಿಸಿದಾಗ ಪ್ರಚಂಡ ಕರತಾಡನವಾಯಿತು.

ಡೊಳ್ಳು ಕುಣಿತ, ಭೂತ ಕುಣಿತ, ಬೇತಾಳ ಕುಣಿತ, ಕರಡಿ ಹುಲಿ ಕುಣಿತಗಳಲ್ಲಿ ವೈಪರೀತ ಪ್ರೇಕ್ಷಕರಿಗೆ ಮತ್ತು ಮೇಳದ ಸದಸ್ಯರಿಗೆ ಮುಖ್ಯ ಮಂತ್ರಿಗಳು ಮೂರುಗಂಟೆ ತಡಮಾಡಿ ಆಗಮಿಸಿದ್ದು ತಿಳಿದಂತಿರಲಿಲ್ಲ. ಆಗಷ್ಟೆ ಪ್ರಾರಂಭವಾದ ಸೋಮನ ಕುಣಿತವನ್ನು ಅರ್ಧಕ್ಕೇ ನಿಲ್ಲಿಸಿ ಮಂತ್ರಿಗಳಿಗೆ ಮಾಲಾರ್ಪಣೆ ಮಾಡಿ ಗೀತೆಯೊಂದಿಗೆ ಸ್ವಾಗತ ಕೋರಲಾಯಿತು. ಅಂತೂ ಮನರಂಜನೆಯಿಂದ ಪ್ರಾರಂಭಿಸಿ ಮುಖ್ಯಮಂತ್ರಿಯ ಭಾಷಣದಿಂದ ಮುಕ್ತಾಯ ಮಾಡುವ ಹೊಸ ಪರಂಪರೆಯನ್ನು ಪ್ರಾರಂಭಿಸಿದ್ದನ್ನು ಕಂಡು ಮನಸ್ಸಿನಲ್ಲಿಯೇ ವೇ.ತಿ. ಮೇಳದವರನ್ನು ಅಭಿನಂದಿಸಿದೆ. ಮೇಳದ ಮುಖ್ಯ ಸಂಚಾಲಕ ಸೂರ್ಯನಾರಾಯಣ ಉರ್ಫ್ ಸೂರಪ್ಪ, ನೆರೆದವರಿಗೆ ವೇ.ತಿ. ಮೇಳದ ಹಿನ್ನೆಲೆ ಪರಿಚಯಿಸುತ್ತ, "ಈ ಸಂಘ, ರಾಜ್ಯಮಟ್ಟದಲ್ಲಿ ಪ್ರಥಮ ಬಾರಿಗೆ ಆಯೋಜಿತವಾಗಿದ್ದು, ಇದರಂಥ ಜಾತ್ಯತೀತ ಮೌಲ್ಯಗಳ ಮೇಲೆ ಆಧಾರಿತ ಸಂಘಟನೆ ಇಡೀ ವಿಶ್ವದಲ್ಲಿ ಇನ್ನೊಂದಿಲ್ಲ! ನಿರಕ್ಷರಿಗಳೇ ಅಧಿಕ ಪ್ರಮಾಣದಲ್ಲಿರುವ ನಮ್ಮ ದೇಶದಲ್ಲಿ ಅವರನ್ನು ಪ್ರತಿನಿಧಿಸುವವರನ್ನೆ ಮೇಳದಲ್ಲಿ ಪದಸ್ಥರನ್ನಾಗಿಸಿದ್ದೇವೆ. ಬರುವ ವರ್ಷಗಳಲ್ಲಿ ವಿವಿಧ ರಾಷ್ಟ್ರಗಳಲ್ಲಿ ಸಮ್ಮೇಳನ ಮಾಡಲಿದ್ದೇವೆ. ನಂತರ ವೇಳೆಗೆ ಅತೀ ಮಹತ್ವಕೊಟ್ಟು, ವಿಶ್ವ ಜೀವಿಗಳ ನೆಮ್ಮದಿಯ ಬಾಳನ್ನೇ ಹಾಳು ಮಾಡಿದ ಅಮೇರಿಕೆಯಲ್ಲಿ ಅದ್ದೂರಿಯ ವಿಶ್ವಸಮ್ಮೇಳನ ಮಾಡಲಿದ್ದೇವೆ. ಈ ಸಂಘದ ಅವಶ್ಯಕತೆ ಏನಿತ್ತು ? ಎಂದು ಹಲವರು ಕೇಳಿದ್ದಾರೆ. ನಿಮ್ಮ ವೇಳೆ ಹಾಳು ಮಾಡದೇ ಸ್ವಲ್ಪದರಲ್ಲಿ ಹೇಳಬಯಸುತ್ತೇನೆ....ನಮ್ಮ ಪೂರ್ವಜರೆಲ್ಲ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಆಧರಿಸಿ, ತಮ್ಮ ಜೀವನಕ್ರಮವನ್ನು ರೂಪಿಸಿಕೊಂಡಿದ್ದರು. ಅಂದರೆ ಸೂರ್ಯೋದಯಕ್ಕೆ ಎದ್ದು ಸೂರ್ಯಾಸ್ತದ ಹೊತ್ತಿಗೆ ಎಲ್ಲ ಚಟುವಟಿಕೆಗಳನ್ನು ಮುಗಿಸಿಕೊಂಡು ಬಿಡುತ್ತಿದ್ದರು. ನಿಶಾಚರರಿಗೆ ಚಂದ್ರ ತಾರೆಗಳು ನೆರವು ನೀಡುತ್ತಿದ್ದವು. ಕಗ್ಗತ್ತಲಿದ್ದಾಗಲೇ ಏಳುವವರಿಗೆ ಕೋಳಿ–ಕಾಗೆ–ಕೋಗಿಲೆಗಳು ಸರಿಯಾದ ವೇಳೆಯನ್ನು ತಿಳಿಸಿ ಹೇಳುತ್ತಿದ್ದವು. ಕೆಲವರು ನೀರಿನ, ಕೆಲವರು ಮರಳಿನ ಗಡಿಯಾರ ಉಪಯೋಗಿಸುತ್ತಿದ್ದರು.

ಮಹಾರಾಜರು, ಬ್ರಿಟಿಶರು ಊರಿಗೊಂದು ಗಡಿಯಾರದ ಕಂಬ ಮಾಡಿಸಿ ತಾಲೂಕ ಕಚೇರಿಯಲ್ಲಿ ತಾಸಿಗೊಮ್ಮೆ ಗಂಟೆ ಹೊಡೆಯುವ ಏರ್ಪಾಡು ಮಾಡಿದ್ದರು. ಸ್ವಾತಂತ್ರ್ಯದ ನಂತರ ಈ ಏರ್ಪಾಡು ಮಣ್ಣುಗೂಡಿ ಹೋಯಿತು. ಸಾರ್ವಜನಿಕ ಆಫೀಸುಗಳ ಗಡಿಯಾರಗಳೆಲ್ಲವೂ ಸದಾಕಾಲ ಹನ್ನೆರಡು ಗಂಟೆ ತೋರಿಸುತ್ತ ಸ್ತಬ್ಧವಾಗಿ ನಿಂತುಬಿಟ್ಟವೆ! ನಗರಗಳಲ್ಲಿ ಯಂತೂ ಸೂರ್ಯ, ಚಂದ್ರ-ನಕ್ಷತ್ರಗಳ ದರ್ಶನವಾಗದಂತೆ ಎತ್ತರದ ಕಟ್ಟಡ ಗಳು ತಲೆಎತ್ತಿ ನಿಂತುಬಿಟ್ಟವೆ.ಮೊದಲು ದಾರಹೋಕರಿಗೆ ವೇಳೆ ವಿಚಾರಿಸಿದರೆ ಅವರು ಕೈಗಡಿಯಾರ ನೋಡಿ, ಎಷ್ಟು ಗಂಟೆ ನಿಮಿಷಗಳೆಂದು ಹೇಳಿ ಮುನ್ನಡೆಯುತ್ತಿದ್ದರು. ಇಂಥ ವೇಳೆ ಕೇಳುವ ಉತ್ತಮ ಸಂಸ್ಕೃತಿಯನ್ನು ಹಾಳುಗೆಡವಿ "ಕೆತ್ತೆಬಜೆ" ಎಂಬ ಅಪಶಬ್ದವನ್ನು ನಮ್ಮಲ್ಲಿ ಅಧಿಕ ಪ್ರಸಂಗ ತನಕ್ಕೆ ಪರ್ಯಾಯವಾಗಿ ಬಳಸಿದರು! ಈಗ ಟೈಮ್ ಎಷ್ಟು? ಎಂದು ವಿಚಾರಿಸಿದರೆ ಆದೇನೋ ಅಪರಾಧ ಮಾಡಿದವರಂತೆ ಅನಿಸುವಂತೆ ದುರುಗಟ್ಟಿ ನೋಡಿ ಹೋಗುತ್ತಿರುತ್ತಾರೆ. ಸರಿಯಾದ ಸಮಯಪ್ರಜ್ಞೆ ಬೆಳೆಸಿಕೊಳ್ಳು ವದು ಹೇಗೆ ಎಂಬುದೂ ಅದಕ್ಕೆ ಶಾಶ್ವತ ಉಪಾಯ ಕಂಡುಹಿಡಿಯುವದೂ ವೇ. ತಿ. ಸಂಘದ ಧ್ಯೇಯೋದ್ದೇಶ" ಎಂದರು. ಕರತಾಡನವಾಯಿತು.

ಚಂದ್ರಪ್ಪ, ಮತ್ತೆ ಅಧ್ಯಕ್ಷರಿಗೆ ಮಾತನಾಡಲು ವಿನಂತಿಸಿಕೊಂಡಾಗ ನಿರ್ವಾಹವಿಲ್ಲದೇ ರಾಯರು ಎದ್ದುನಿಂತರು. ಗಂಟಲು ಸರಿಮಾಡಿಕೊಂಡರು. ಎದುರಿಗಿದ್ದ ಲೋಟ ನೀರು ಕುಡಿದರು. ನಂತರ ನಿಧಾನವಾಗಿ ತಮ್ಮ ವಿಚಾರಗಳನ್ನು ಸಭಿಕರ ಮುಂದಿಟ್ಟರು. 'ಈ ವಿಶ್ವದಲ್ಲಿ ಸಕಲ ಚಟುವಟಿಕೆ ಗಳೂ ಕ್ರಮಬದ್ಧವಾಗಿ, ಸಮಯಕ್ಕನುಸಾರವಾಗಿ ಜರುಗುತ್ತವೆ. ಸೂರ್ಯನು ನಿರ್ದಿಷ್ಟ ಸಮಯಕ್ಕೆ ಉದಯಿಸಿ ಅಸ್ತಂಗತನಾಗುತ್ತಾನೆ. ಇದೇ ಮೇಲ್ಪಂಕ್ತಿಯನ್ನು ಚಂದ್ರ-ನಕ್ಷತ್ರಗಳು ಅನುಸರಿಸುತ್ತವೆ. ಹೂಗಳು ಸಕಾಲಕ್ಕೆ ಅರಳುತ್ತವೆ. ಹಕ್ಕಿಗಳು ತಾವಾಗಿ ಎದ್ದು ಸಕಾಲಕ್ಕೆ ಕೂಜನ- ಗೈದರೆ ಮಾನವನಿಗೆ ಮಾತ್ರ ಕೃತ್ರಿಮ ಗಡಿಯಾರದ ಅವಶ್ಯಕತೆ ಏನು? ಕೈಗೆ ಸ್ವಯಂಚಾಲಿತ ಗಡಿಯಾರ ಕಟ್ಟಿಕೊಂಡರೂ ಎಲ್ಲಾ ಕೆಲಸಗಳನ್ನು

ವಿಳಂಬವಾಗಿ ಮಾಡಿ ಮುಗಿಸುವದಕ್ಕಿಂತ ಗಡಿಯಾರದ ಗೊಡವೆಗೇ ಹೋಗದೇ ಎಲ್ಲ ಕೆಲಸಗಳನ್ನು ಮಾಡಿ ಕ್ರಮಬದ್ಧವಾಗಿ ಮುಗಿಸುವದು ನಿಮ್ಮ ಸಂಘದ ಸಾಧನೆಯಾಗಲಿ, ಎಂದು ಹಾರೈಸುತ್ತೇನೆ.' ಇಷ್ಟು ಹೇಳಿ ಆಸನಸ್ಥರಾದಾಗ ಪ್ರತಿಯೊಬ್ಬರೂ ರಾಯರು ಹೇಳಿದ್ದೇನು ? ಎಂದು ಅರ್ಥೈಸಲಾರಂಭಿಸಿದರು. ಒಬ್ಬ ಮುದುಕರು ಮಾತ್ರ "ತಡಮಾಡಿ ಬಂದ ಸಿಎಮ್ಮ್‌ಗೂ ಕೊಟ್ರುಪಾ ಡೋಸು !" ಎಂದು ಉದ್ಗರಿಸಿದರು.

ಜೀವಂತ ಬಾಂಬು ಎಂದೇ ಖ್ಯಾತಿ ಪಡೆದ ಅಮಾಸೆಗೌಡ ಎದ್ದು ನಿಂತು, "ಸರಿಯಾದ ವೇಳೆ ತಿಳ್ಕಳದು ನಮ್ಮ ಜನ್ಮಸಿದ್ಧ ಹಕ್ಕು. ಇದನ್ನು ಚಲಾಯಿಸಲು ಅಡ್ಡಬರುವವರನ್ನು ಹೊಡೆದೊಡಿಸಲೆಂದೇ ನಾವೆಲ್ಲ ಸೇರಿದ್ದೇವೆ. ನಾವೆಲ್ಲ ವೇಳೆ ತಿಳಿಯದವರಿರಬಹುದು. ಆದರೆ ವೇಳೆ ಹಾಳು ಮಾಡುವವರಲ್ಲ........ಎನ್ನುತ್ತಿದ್ದಾಗಲೇ ಯುವಜನರೆಲ್ಲ ಜೋರಾಗಿ ಚಪ್ಪಾಳೆ ತಟ್ಟಿ ಸಿಳ್ಳು ಹಾಕಿ, ಅಮಾಸಪ್ಪ ಜಿಂದಾಬಾದ್ ! ಎಂದು ಕೂಗಲಾರಂಭಿಸಿದರು. "ಈಯಪ್ಪನಿಗೆ ಎಲೆಕ್ಶನ್ನಿಗೆ ಎಲ್ಲೋ ಮನಸೈತೆ !" ಎಂದು ಇತರರಿಗೆ ಪರಿಚಯಿಸಿದನೊಬ್ಬ. ನಮ್ಮ ಸಂಘದಲ್ಲಿ ವಿಶ್ವಾಸವಿಡದ ಕಿತಾಪತಿಯಪ್ಪ" ಎಂದು ನಿರ್ಧರಿಸಿದ ಯುವ ಸದಸ್ಯನೋರ್ವ.

ವಯೋವೃದ್ಧ ಗಿರಿಯಪ್ಪ ಎದ್ದುನಿಂತು ನಡುಗುವ ಧ್ವನಿಯಲ್ಲಿ "ಕೈ ಜೋಡ್ಸಿ ಕೇಳ್ಕೊತೀನಿ. ನಾವು ರಾಜಕೀಯ ಮಾಡೋರಲ್ಲ. ಯಾರಿಗೂ ಎಮ್ಮೆಲ್ಯೆ ಅಥವಾ ಮಂತ್ರಿ ಆಗೋ ಮನ್ಸು ಖಂಡಿತಾ ಇಲ್ಲಾ ! ಇಲೆಕ್ಶನ್‌ಗೂ ನಿಂತ್ಕಳಾರಲ್ಲ. ಆದ್ರೆ ನಮ್ಗೂ ಒಂದು ಸಂಘ ಬೇಕು. ಮಡಿವಾಳ, ನೇಕಾರ್ರು, ಹಾಲುಮತದೋರು, ಉಪ್ಪಾರರು ಎಲ್ಲಾ ಒಂದೊಂದು ಸಂಘ ಮಾಡ್ಕೊಂಡವ್ರೆ. ನಮ್ಗೂ ಸಂಘ ಬೇಕು !" ಎಂದಾಗ ಎಲ್ಲರೂ ನಕ್ಕು ಬಿಟ್ಟರು.

ಸಂಘದ ಸುಶಿಕ್ಷಿತ ಬಂಡಾಯಕೋರ ಪ್ರತಿನಿಧಿ ಗುಂಡಪ್ಪ ಎದ್ದುನಿಂತ. "ನಾನು, ನನ್ನ ತಂದೆ, ತಾತಾ, ಮುತ್ತಾತ ಯಾರೂ ಯಾವದೇ ತರ ಗಡಿಯಾರ ಪಡೆದವರಲ್ಲ, ಆದ್ದರಿಂದ ಶತಕಗಳಿಂದಲೂ ಈ ಮೂಲಭೂತ

ಹಕ್ಕಿನಿಂದ ವಂಚಿತರಾಗಿದ್ದೇವೆ. ಗಡಿಯಾರಗಳು ಪ್ರಚಾರಕ್ಕೆ ಬಂದದ್ದೇ ಇತ್ತೀಚೆಗೆ ಅಂತ ನಮ್ಮ ವಿರೋಧಿಗಳು ಹೇಳಬಹುದು. ಆದರೆ ಹಿಂದಿನ ಕಾಲದಲ್ಲೂ ಸೂರಪ್ಪ ಹೇಳಿದ ಹಾಗೆ ನೀರಿನ, ಮರಳಿನ ಗಡಿಯಾರಗಳು ಇದ್ದವು. ಆದರೆ ಆಗಲೂ ಅವುಗಳು ನಮಗೆ ದೊರೆಯದಂತೆ ಮಾಡಿ ಮೇಲು ಜಾತಿಯವರು ಅನ್ಯಾಯ ಮಾಡಿದ್ದಾರೆ. ಕೆಳ ಜಾತಿಯವರಿಗೆ ಸಂವಿಧಾನ ದಲ್ಲಿ ಸವಲತ್ತು ಒದಗಿಸಿದಂತೆ ವೇ. ತಿ. ಸಂಘದ ಎಲ್ಲ ಸದಸ್ಯರಿಗೆ ಇನ್ನು ಮೇಲಾದರೂ ಕೆಲವು ಹಕ್ಕುಗಳನ್ನು ಕೊಡಬೇಕೆಂಬ ಚಳವಳಿಯನ್ನು ನಾವು ಪ್ರಾರಂಭಿಸಿ ಎಲ್ಲರನ್ನೂ ಬಡಿದೆಬ್ಬಿಸುವ ಕಾಲ ಬಂದಿದೆ........ಆದರೆ ಕೂಡಲೇ ಬಂಡೇಳುವದನ್ನು ತಪ್ಪಿಸಲು ಸದ್ಯಕ್ಕೆ ಪ್ರತಿ ಸದಸ್ಯರಿಗೆ ಒಂದೊಂದು ಕೈಗಡಿ ಯಾರವನ್ನು ಘನ ಸರಕಾರದವರು ಮಂಜೂರು ಮಾಡಬೇಕು. ಇದರ ಲಾಭ ಕುಟುಂಬದ ಸದಸ್ಯರಿಗೆಲ್ಲ ಲಭಿಸಬೇಕು. ಅವೆಲ್ಲ ಆಟೋಮೆಟಿಕ್ ವಾಚ್ ಗಳಿರಬೇಕು. ಆದರೆ ಗಂಟೆ ನೋಡಲು ಬಾರದಷ್ಟು ಅನಕ್ಷರಸ್ಥರು ನಮ್ಮಲ್ಲಿರುವುದರಿಂದ ಪ್ರತಿ ಅರ್ಧಗಂಟೆ, ಒಂದು ಗಂಟೆಗೊಮ್ಮೆ ಸಂಗೀತ ದೊಂದಿಗೆ ಎಣಿಸಿ ಗಂಟೆ ಹೊಡೆಯುವ ಸವಲತ್ತು ಆ ವಾಚುಗಳಿಗಿರಬೇಕು. ಭಾರತೀಯ ವಾಚುಗಳು ಮೇಲ್ಮಟ್ಟದ್ದು ಆಗುವವರೆಗೆ ಫಾರಿನ್ ವಾಚು ಗಳನ್ನೇ ಕೊಡಮಾಡಿದರೆ ಪುನಃ ಪುನಃ ರಿಪೇರಿಗೆ ಕೊಡವದು ತಪ್ಪುತ್ತದೆ. ಈ ಅಲ್ಪ ಬೇಡಿಕೆಯನ್ನು ಮುಖ್ಯಮಂತ್ರಿಗಳು ಕೊಡಮಾಡುತ್ತಾರೆಂದು ನಂಬಲೇ ?" ಎಂದು ಮಾತು ಮುಗಿಸಿದಾಗ ಸಭೆಯಲ್ಲಿ ಹರ್ಷೋದ್ಗಾರದ ಚಪ್ಪಾಳೆ.

ಈ ಬೇಡಿಕೆಯಿಂದ ವೇ. ತಿ. ಸಂಘದ ಕಾಳಪ್ಪನ ಬಣದ ಮುಖ್ಯಸ್ಥನಿಗೆ ಅವಮಾನವಾಯಿತು. ಆತ ಎದ್ದು ನಿಂತು, 'ಮಹಾತ್ಮಾ ಗಾಂಧಿಯ ದೇಶದಲ್ಲಿ ಹುಟ್ಟಿದವರು, ವಿದೇಶಿ ಗಡಿಯಾರದ ಬೇಡಿಕೆ ಮುಂದಿಡುವದು ಅತ್ಯಂತ ಶೋಚನೀಯ ! ಪಶುಪಕ್ಷಿಗಳಿಗೆ ಆಹಾರ ಅವಶ್ಯವಿದ್ದಂತೆ ನಮಗೂ ಅವಶ್ಯ. ಎಲ್ಲ ಸದಸ್ಯರ ಜೀವನಾವಶ್ಯಕತೆಗಳ ಪೂರೈಕೆ ಆಗುವ ತನಕ ಇತರ ಅನವಶ್ಯಕ ಸಾಮಾನುಗಳಿಗೆ ನಾವು ಕೈ ಚಾಚಕೂಡದು ! ನಮ್ಮಜ್ಜ ತಾತಂದಿರು ಅರೆ ಹೊಟ್ಟೆ ತಿಂದು ಜೀವಿಸಿದರು. ನಮಗಾಗಿ ಧನ, ಧಾನ್ಯ,

ಜಮೀನು ಬಿಟ್ಟು ಹೋಗಲು ಅವರಿಗೆ ಸಾಧ್ಯವಾಗಲಿಲ್ಲ. ಈಗ ಆಳುವ ಸರಕಾರ, ಈ ಅಂಶ ನೆನಪಿಟ್ಟು ನಮ್ಮನ್ನು ಈಗಲೂ ಇವುಗಳಿಂದ ವಂಚಿತರಾಗ ದಂತೆ ನೋಡಿಕೊಳ್ಳಬೇಕು. ಸರಕಾರಿ, ಸಾಹುಕಾರಿ, ಮತ್ತು ಖಾಸಗಿ ಸಂಸ್ಥೆಗಳಲ್ಲಿ ಸಹ ವೇ. ತಿ. ಸಂಘದವರಿಗೆ ಶೇಕಡಾ ಹತ್ತರಷ್ಟು ಮೀಸಲಾತಿ ಇರಲೇಬೇಕು, ಎಂಬ ಕಡ್ಡಾಯ ತರಬೇಕು. ಜನಸಂಖ್ಯೆ ಹೆಚ್ಚಿದಂತೆ ಅನಕ್ಷರಸ್ಥರ ಸಂಖ್ಯೆಯೂ ಬೆಳೆದು ಅವರೆಲ್ಲ ಗಡಿಯಾರ ನೋಡಿ ವೇಳೆ ತಿಳಿದು ಕೊಳ್ಳದ ಸ್ಥಿತಿ ಬಂದು ಪೇಚಾಡಲಾರಂಭಿಸಿದರು. ಈ ಪರಿಸ್ಥಿತಿ ಕೂಡಲೇ ದೂರವಾಗಬೇಕು. ಮಕ್ಕಳು ಪ್ರತಿ ದಿನ ಶಾಲೆಗೆ ಹೋಗುವಂತೆ ಮನ ಒಲಿಸಲು ಒಂದು ರೂಪಾಯಿ ಅಥವಾ ಒಂದು ಲೋಟ ಹಾಲು ಕೊಡಮಾಡಿ ನಿಕೃಷ್ಟ ತನ ತೋರಿಸಕೂಡದು ! ಬದಲಿಗೆ ಪ್ರತಿ ಮಗುವಿಗೆ ಮಾಸಿಕ ವೇತನ ಕೊಡ ಮಾಡುವದು ವೇ. ತಿ. ಸಂಘದ ಘನತೆಗೆ ಸರಿಯಾದದ್ದು. ಅದರಂತೆ ವೇ. ತಿ. ಸಂಘದವರ ಪ್ರತ್ಯೇಕ ವ್ಯಕ್ತಿತ್ವ ತೋರುವಂಥ ಸ್ವಚ್ಛ ಮಾಡಲು ಸುಲಭವಾಗು ವಂಥ ಪೊಲಿಸ್ಟರ್ ಯುನಿಫಾರ್ಮ ಬಟ್ಟೆ ಉಚಿತವಾಗಿ ದೊರೆಯಬೇಕು. ಮಾಧ್ಯಮಿಕ ಶಾಲಾ ಹುಡುಗರಿಗೆ ವಸತಿ ಶಾಲಾ ಸೌಕರ್ಯವಷ್ಟೇ ಅಲ್ಲದೇ ಅವರಿಗೆ ಬೇಕೆನಿಸಿದಾಗ ಪಾಲಕರನ್ನು ನೋಡಿ ಬರಲು ರಜಾ ಸೌಕರ್ಯ, ಪ್ರವಾಸ ಭತ್ತೆ ಕೊಡಬೇಕು. ಅವರಿಗೆ ಪ್ರತಿವರ್ಷ ಉಚಿತ ಭಾರತದರ್ಶನ ಮಾಡಿಸಿ ದೃಷ್ಟಿ ವೈಶಾಲ್ಯ ಮೂಡಿಸಬೇಕು. ಕಾಲೇಜಸ್ತರದಲ್ಲಿ ಈ ಸವಲತ್ತು ಗಳು ಮುಂದರಿಯಬೇಕು. ಒಮ್ಮೆಯಾದರೂ ಅವರಿಗೆ ಒಂದು ವಿದೇಶ ಯಾತ್ರೆಯ ಅನುಕೂಲ ಒದಗಿಸಿಕೊಟ್ಟು ವಿಶ್ವ ನಾಗರಿಕ ದೃಷ್ಟಿ ಬೆಳೆಸಲು ಸಹಾಯ ಮಾಡಬೇಕು. ತಾಂತ್ರಿಕ ಸಂಸ್ಥೆಗಳಲ್ಲಿ ವೇ. ತಿ. ಸಂಘ ಸದಸ್ಯರ ಮಕ್ಕಳಿಗೆ ಮೀಸಲಾತಿಬೇಕು. ಸಂಘದ ಸದಸ್ಯರಿಗೆಲ್ಲ ತಲೆಯ ಮೇಲೊಂದು ಸೂರು ಬೇಕೇ ಬೇಕು. ಅವು ಪಕ್ಕಾ ಮನೆಗಳಾಗಿರಬೇಕು. ನಗರ ಸಭೆಯ ವರು ಪೌರ ಕಾರ್ಮಿಕರಿಗಾಗಿ ಕಟ್ಟಿದಂಥವಲ್ಲ. ! ವಿಧಾನ ಸೌಧದಷ್ಟು ಗಟ್ಟಿ ಮುಟ್ಟಾಗಿರಬೇಕು. ಇವುಗಳ ಬೆಲೆಯನ್ನು ನೂರು ಕಂತುಗಳಲ್ಲಿ ಸಂದಾಯ ಮಾಡುವ ಅನುಕೂಲವಲ್ಲದೇ ಸದಸ್ಯರ ಉತ್ಪನ್ನದ ಶೇಕಡಾ ಹತ್ತಕ್ಕಿಂತ ಹೆಚ್ಚಿರಬಾರದು. ನಮ್ಮ ಸಮಸ್ಯೆಗಳು ಬೆಟ್ಟದಷ್ಟು ಇದ್ದರೂ ಅತಿ ಮುಖ್ಯವಾದವನ್ನು ಮಾನ್ಯ ಮುಖ್ಯ ಮಂತ್ರಿಗಳಿಗೆ ತಿಳಿಸಿ ಹೇಳಲು ಹೆಚ್ಚಿನ

ಕಾಲಾವಕಾಶ ತೆಗೆದುಕೊಂಡದ್ದಕ್ಕೆ ಕ್ಷಮೆ ಕೋರುತ್ತೇನೆ.' ಎಂದು ಮಾತು ಮುಗಿಸಿದಾಗ ಕಿವಿಗಡಚಿಕ್ಕುವ ಚಪ್ಪಾಳೆ ಯುವ ಜನಾಂಗ, ತಕ್ಷಣ ಈ ಬೇಡಿಕೆಗಳನ್ನು ನೆರವೇರಿಸುವಂತೆ ಬೊಬ್ಬಿಡಲಾರಂಭಿಸಿದರು.

ಮುಖ್ಯ ಮಂತ್ರಿಗಳು ಈಗಾಗಲೇ ಭೂರಹಿತರು, ನಿರುದ್ಯೋಗಿಗಳು ಸೂರಿಲ್ಲದವರು, ಸಾಲ ಸಿಗದವರೆಲ್ಲರ ಸಭೆಗಳನ್ನು ಉದ್ದೇಶಿಸಿ ಮಾತನಾಡಿ ಬಂದಿದ್ದರು. ಅವರಿಗೆ ಇವರ ಯಾವ ಬೇಡಿಕೆಗಳೂ ವಿಪರೀತ ವೆಚ್ಚದ್ದು ಅನಿಸಲೇ ಇಲ್ಲ. ಎಂದಿನಂತೆ ತಮ್ಮ ಸಂಪೂರ್ಣ ಬೆಂಬಲ, ಆಶ್ವಾಸನೆಗಳ ಭಾಷಣ ಪ್ರಾರಂಭಿಸಿದರು. 'ನಮ್ಮ ಬೆಂಗಳೂರು ಒಂದರಲ್ಲೇ ಇಷ್ಟೊಂದು ಜನ ವೇಳೆ ತಿಳಿಯಲಾಗದೇ ಒದ್ದಾಡುತ್ತಿದ್ದಾರೆಂಬ ಅಂಶ, ಗಮನಕ್ಕೆ ಬಂದಿರಲೇ ಇಲ್ಲ. ಇಂಥವರನ್ನೆಲ್ಲ ಸಂಘಟಿಸಿ ಈ ಹೊತ್ತು ಒಂದೇ ಸೂರಿನಡಿ ತಂದದ್ದು ಮಹಾ ಸಾಧನೆಯೇ ಸೈ ! ಬರುವ ವರ್ಷಗಳಲ್ಲಿ ಒಂದು ವಿಶ್ವ ಸಮ್ಮೇಳನ ಜರುಗಿಸಲಿರುವ ವಿಚಾರ, ಅತ್ಯಂತ ಪ್ರಶಂಸನೀಯ. ನಿಮ್ಮಗಳ ಸಕಲ ಯತ್ನಗಳಿಗೂ ಯಶ ಕೋರುವೆ. ನೀವು ಮುಂದಿಟ್ಟ ಬೇಡಿಕೆಗಳು ಈಡೇರಿಸಲಾರದಂಥವೇನೂ ಅಲ್ಲ. ಆದರೆ ಈ ರಾಜ್ಯ, ಈ ಸರಕಾರ ನನ್ನ ಸ್ವಂತ ಜಾಗೀರು ಅಲ್ಲ. ಅಂತೆಯೇ ಪ್ರತಿ ಬೇಡಿಕೆಯನ್ನು ನಿಯಮ, ಕಾನೂನಿನನ್ವಯ ಪರಿಶೀಲಿಸಿ ಪೂರೈಸಬೇಕಾಗುತ್ತದೆ. ಇದಕ್ಕೆಲ್ಲ ತುಂಬ ಹಣ ಮತ್ತು ಕಾಲಾವಕಾಶಬೇಕು. ಅಲ್ಲಿಯವರೆಗೆ ಕೈ ಕಟ್ಟಿಕೊಂಡು ಸುಮ್ಮನೇ ಕೂಡ್ರದೇ. ಕೆಲವು ಸವಲತ್ತುಗಳನ್ನು ಕೂಡಲೇ ಕೊಡಮಾಡುವ ವ್ಯವಸ್ಥೆ ಮಾಡುತ್ತೇನೆ. ಪ್ರತಿ ಶಹರದಲ್ಲಿ ಬೀಟ್ ಪೋಲಿಸರು ತಮ್ಮ ಬಂದೂಕು, ಲಾಠಿಗಳ ಜೊತೆಗೆ ಜಾಗಟೆಯನ್ನು ಹೊತ್ತು ತಿರುಗಬೇಕು. ತಾವು ಗಸ್ತಿ ಹಾಕುವ ಬೀದಿಯವರಿಗೆಲ್ಲ ಕೇಳಿಸುವಂತೆ ಪ್ರತಿ ತಾಸಿಗೊಮ್ಮೆ ಜೋರಾಗಿ ಜಾಗಟೆ ಬಾರಿಸಬೇಕು. ತಾಲೂಕು ಕಚೇರಿಗಳಲ್ಲಿ ಭವ್ಯ ಕಂಚಿನ ಗಂಟೆ ತೂಗು ಹಾಕಿಸಿ ಸರ್ವರಿಗೂ ಕೇಳಿಸುವಂತೆ ಗಂಟೆ ಹೊಡೆಸುತ್ತೇನೆ. ಹಳ್ಳಿಗಳಲ್ಲಿ ಗ್ರಾಮೋದ್ಯೋಗ ಅಭಿವೃದ್ಧಿ ಕೇಂದ್ರಗಳಲ್ಲಿ ಜೋರಾಗಿ ಕೂಗುವ ಬಲಿಷ್ಠ ಹುಂಜಗಳ ಸಾಕಾಣಿಕೆಗೆ ಹೆಚ್ಚಿನ ಪ್ರೋತ್ಸಾಹ ಕೊಡಿಸಿ ಸಕಲರೂ ನಸುಕಿನಲ್ಲೇ ಎದ್ದು ಕಾರ್ಯ ತತ್ಪರರಾಗುವಂತೆ ಏರ್ಪಾಡು ಮಾಡುತ್ತೇನೆ.

ಈ ಏರ್ಪಾಡಿಗೆ ಚ್ಯುತಿ ಬಂದಲ್ಲಿ ನಿಮ್ಮ ವೇ. ತಿ. ಸಂಘದವರು ಕೂಡಲೇ ನಮ್ಮ ಗಮನಕ್ಕೆ ತಂದರೆ ಹುಂಜ ಕೂಗದೇ ಇರಲು ಕಾರಣರಾದವರ ಕುರಿತು ಕ್ರಮ ತೆಗೆದುಕೊಳ್ಳುತ್ತೇವೆ ಎಂದು ಈ ತುಂಬಿದ ಸಭೆಯೆದುರು ಆಣೆ ಮಾಡಿ ಹೇಳುತ್ತೇನೆ” ಎಂದು ಬೆವರು ಒರಿಸಿಕೊಳ್ಳುತ್ತ ಎಲ್ಲರಿಗೂ ನಮಸ್ಕರಿಸಿ ಹೊರಟು ನಿಂತಾಗ ಮಾ. ಮು. ಮಂತ್ರಿಗಳು ಎಲ್ಲರಿಗೂ ಚಳ್ಳೇ ಕಾಯಿ ತಿನಿಸಿದ್ದು ಸಭಿಕರಿಗೆ ತಿಳಿಯದೇ ಇರಲಿಲ್ಲ.

ಗೃಹಾಭಿಮುಖಿಯಾದಾಗ ರಾಯರು, ‘ಇಂಥ ಸಭೆಗಳಲ್ಲಿ ಏನೂ ಸಾಧಿಸಲಾಗುವದಿಲ್ಲವೆಂದು ಮೊದಲೇ ಹೇಳಿದ್ದೆ. ಇನ್ನು ಮುಂದೆಯಾದರೂ ಇಂಥ ಆಮಂತ್ರಣಗಳನ್ನು ಸ್ವೀಕರಿಸಬೇಡ’ ಎಂದು ಕಟ್ಟು ನಿಟ್ಟಾಗಿ ಹೇಳಿದರು. ಮನೆ ಸೇರಿದ ಮೇಲೆ ಮು. ಮಂತ್ರಿಗಳ ಅನುಕರಣೆಯಾಯಿತು. ■ ದೇಶ ಮಧ್ಯ ರಾತ್ರಿ ಕೇಳಿಸಬಹುದಾದ ಜಾಗಟೆನಾದ ಮತ್ತು ಬೆಳಗಿನ ಜಾವ ಬಲಿಷ್ಠ ಹುಂಜಗಳ ಕೂಗು ಗ್ರಾಮೀಣ ಪ್ರದೇಶಗಳಲ್ಲಿ ಮೊಳಗಬಹುದಾದ ಭವಿಷ್ಯ ನೆನೆ ನೆನೆದು ನಗುವಂತೆ ಆಯಿತು.





ಡಾ. ಜ್ಯೋತ್ಸ್ನಾ ಕಾಮತ್‌ರು ಸಾಮಾಜಿಕ ಇತಿಹಾಸದಲ್ಲಿ ಡಾಕ್ಟರೇಟ ಪದವಿ ಪಡೆದಿದ್ದಾರೆ. 'Social Life in Medieval Karnataka' ಎಂಬ ಇವರ ಗ್ರಂಥವನ್ನು ಹೊಸ ದಿಲ್ಲಿಯ ಖ್ಯಾತ ಅಭಿನವ ಪ್ರಕಾಶನದವರು ಪ್ರಕಟಿಸಿದ್ದಾರೆ. ಮುಂಬಯಿಯ ವಿಶ್ವವಿದ್ಯಾಲಯದವರು ಪ್ರಕಟಿಸಿದ 'ಕರ್ನಾಟಕದ ಶಿಕ್ಷಣ ಪರಂಪರೆ' ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯವರು 1988ರ ಉತ್ತಮ ಸಂಶೋಧನಾ ಗ್ರಂಥವೆಂದು ಬಹುಮಾನ ಕೊಟ್ಟುಗೌರವಿಸಿದ್ದಾರೆ. ಇವರ ಪ್ರಪ್ರಥಮ ಸೃಜನಶೀಲ ಕೃತಿಯಾದ 'ಸಂಸಾರದಲ್ಲಿ ಸ್ವಾರಸ್ಯ' ಇದಾಗಲೇ ದ್ವಿತೀಯ ಆವೃತ್ತಿಯಾಗಿ ಪ್ರಕಟಗೊಂಡಿದೆ. ಶ್ರೀಮತಿ ಕಾಮತ್‌ರು ಬೆಂಗಳೂರ ಆಕಾಶವಾಣಿಯ ಕೇಂದ್ರದ ನಿರ್ದೇಶಕಿ ಎಂದು ಸೇವೆ ಸಲ್ಲಿಸುತ್ತಿದ್ದಾರೆ.



ಡಾ. ಜ್ಯೋತ್ಸ್ನಾ ಕಾಮತ್‌ರು ಸಾಮಾಜಿಕ ಇತಿಹಾಸದಲ್ಲಿ ಡಾಕ್ಟರೇಟ ಪದವಿ ಪಡೆದಿದ್ದಾರೆ. 'Social Life in Medieval Karnataka' ಎಂಬ ಇವರ ಗ್ರಂಥವನ್ನು ಹೊಸ ದಿಲ್ಲಿಯ ಖ್ಯಾತ ಅಭಿನವ ಪ್ರಕಾಶನದವರು ಪ್ರಕಟಿಸಿದ್ದಾರೆ. ಮುಂಬಯಿಯ ವಿಶ್ವವಿದ್ಯಾಲಯದವರು ಪ್ರಕಟಿಸಿದ 'ಕರ್ನಾಟಕದ ಶಿಕ್ಷಣ ಪರಂಪರೆ' ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯವರು 1988ರ ಉತ್ತಮ ಸಂಶೋಧನಾ ಗ್ರಂಥವೆಂದು ಬಹುಮಾನ ಕೊಟ್ಟು ಗೌರವಿಸಿದ್ದಾರೆ. ಇವರ ಪ್ರಪ್ರಥಮ ಸೃಜನಶೀಲ ಕೃತಿಯಾದ 'ಸಂಸಾರದಲ್ಲಿ ಸ್ವಾರಸ್ಯ' ಇದಾಗಲೇ ದ್ವಿತೀಯ ಆವೃತ್ತಿಯಾಗಿ ಪ್ರಕಟಗೊಂಡಿದೆ. ಶ್ರೀಮತಿ ಕಾಮತ್‌ರು ಬೆಂಗಳೂರ ಆಕಾಶವಾಣಿಯ ಕೇಂದ್ರದ ನಿರ್ದೇಶಕಿ ಎಂದು ಸೇವೆ ಸಲ್ಲಿಸುತ್ತಿದ್ದಾರೆ.

ಪ್ರಕಾಶಕರು

ಪುಸ್ತಕಾಲಯ :: ಜಯನಗರ :: ಬೆಂಗಳೂರು - 41.